# ಕನ್ನಡ ವಿಶ್ವವಿದ್ಯಾಲಯ,ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಶೋಧನಾ ಪ್ರಬಂಧ

## 'ಕೆ.ಪಿ. ಪೂರ್ಣ ಚಂದ್ರ ತೇಜಸ್ವಿಯವರ ಕಾದಂಬರಿಗಳ ವಸ್ತು ಮತ್ತು ತಂತ್ರ'

**ನೋಂದಣಿ ಸಂಖ್ಯೆ ; KVMBKS-00534**


**ಕಾವ್ಯಮಂಡಲ**

ನಂ.13/ 85,ರಾಷ್ಟ್ರೀಯ ವಿದ್ಯಾಲಯ ರಸ್ತೆ

ಬಸವನಗುಡಿ, ಬೆಂಗಳೂರು – 560 004

2012

# ಪರಿವಿಡಿ

# ಅಧ್ಯಾಯ-1

## ಅಧ್ಯಯನದ ಉದ್ದೇಶ, ಸ್ವರೂಪ ಹಾಗೂ ವ್ಯಾಪ್ತಿ

ಕಾಲ ಬದಲಾದಂತೆ ಒಂದು ಸಮಾಜ ವ್ಯವಸ್ಥೆಯ ಆಲೋಚನೆ ಗ್ರಹಿಕೆಯ ಮಾದರಿಯಾಗಿ ರೂಪು ಪಡೆಯುತ್ತದೆ. ಆದರೆ ಅನ್ಯ ದೇಶೀಯ ಪ್ರಭಾವ ಪ್ರೇರಣೆಗಳಿಂದ ತನ್ನಲ್ಲಿಯೇ ಆ ಸಮಾಜ ಕೆಲವು ಬದಲಾವಣೆ ಮಾಡಿಕೊಳ್ಳುತ್ತದೆ. ಈ ಪ್ರಜ್ಞೆಯನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಹಿಡಿಯುವ ಕಾದಂಬರಿಕಾರ ಆ ಬದಲಾವಣೆಯನ್ನು ತನಗೆ ಆಗುವ ಅನುಭವಗಳ ಮೂಲಕ ಹಿಡಿಯಲು ಸಾಗುತ್ತಾನೆ. ಇದಕ್ಕೆ ಮೂಲವಾಗಿ ತನ್ನ ಜೀವನ ಕ್ರಮದಲ್ಲಿ ಆಗುವ ಬದಲಾವಣೆ ಹಾಗೂ ತನ್ನ ಮುಂದೆ ಇರುವ ಸಮಾಜದಲ್ಲಿನ ಜನರ ಜೀವನ ಕ್ರಮವನ್ನು ಅರ್ಥೈಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾನೆ. ಏಕೆಂದರೆ ಕಾದಂಬರಿ ತನ್ನ ಕಾಲದ ಸಾಮಾಜಿಕ ವಾಸ್ತವವನ್ನು ಒಂದು ಚೌಕಟ್ಟಿನೊಳಗೆ ಹಿಡಿದು ಬಂದಿಸಿಕೊಳ್ಳುತ್ತದೆ. ಹಾಗೂ ತನ್ನ ಕಾಲದ ಇತಿಹಾಸವನ್ನು ತನ್ನ ರಚನೆಯ ಸ್ವರೂಪದೊಳಗೆ ಭದ್ರ ಪಡಿಸುತ್ತದೆ. ಆದ್ದರಿಂದ "ಕಾದಂಬರಿಕಾರನಿಗೆ ಸಮಾಜವೇ ಮೂಲದ್ರವ್ಯವೆಂದು ನಂಬಲಾಗಿದೆ."[1] ಆ ದ್ರವ್ಯವೇ ಕಾದಂಬರಿಯ ವಸ್ತುವಾಗಿ ಮಾರ್ಪಡುತ್ತದೆ. ವಸ್ತುವನ್ನು ಸಂರಚಿಸಲು, ಅದಕ್ಕೆ ಒಂದು ರೂಪ ಒದಗಿಸಲು ಆತ ತನ್ನ ಅನುಭವಗಳನ್ನೇ ಸಾಕಾರಗೊಳಿಸುತ್ತಾನೆ. ಡಾ. ಸುರೇಶ ಪಾಟೀಲರವರು ಅಭಿವ್ಯಕ್ತಿಸುವಂತೆ "ಕಾದಂಬರಿಯಲ್ಲಿ ಇರುವ ತಾತ್ವಿಕ ಚೌಕಟ್ಟು ತನ್ಮೂಲಕ ನಡೆಯುವ ಜೀವನ ಮೌಲ್ಯಗಳ ಶೋಧ, ಕಾದಂಬರಿಯ ಕೇಂದ್ರ ಪ್ರಜ್ಞೆ, ಘಟನೆಗಳ ನಾಟ್ಯೀಕರಣ, ಕ್ರಿಯೆಯಲ್ಲಿ ಇರಬಹುದಾದ ಘರ್ಷಣೆ ಇವೆಲ್ಲ ಕಥಾ ಸಂವಿಧಾನದಲ್ಲಿ ಅಂತರ್ಗತವಾಗಿರುತ್ತವೆ ಮತ್ತು ಇವುಗಳ ವಿಶಿಷ್ಟ ನೇಯ್ಗೆ-ಸಂಯೋಜನೆಯಲ್ಲಿ ಇರುವ ಕಲಾ ಕೌಶಲಾದಿ ಇವು ವಾಸ್ತವಿಕ ವಸ್ತು ಜಗತ್ತಿನ ಅನುಕರಣವಾಗಿದ್ದೂ ನಿತ್ಯ ಜಗತ್ತಿನಿಂದ ಬೇರೆಯಾಗಿರುತ್ತವೆ. ಈ ದೃಷ್ಟಿಯಿಂದಲೇ, ಕಾದಂಬರಿಯೊಳಗೆ ಒಂದು ಪರಿಪೂರ್ಣ ಜಗತ್ತು ಇರುತ್ತದೆ ಎನ್ನಬಹುದು ಕಾದಂಬರಿ ರೂಪ ಮತ್ತು ಸಾಮಾಜಿಕ ಸಂರಚನೆಗಳ ನಡುವಿನ ಸೂಕ್ಷ್ಮ ಸಂಬಂದವೂ ಈ ಸಂವಿಧಾನದಲ್ಲಿಯೆ ವ್ಯಕ್ತವಾಗುವುದು. ಮತ್ತು ಇದು ಸಾಧ್ಯವಾಗುವುದು ನಿರೂಪಣಾತ್ಮಕ ಭಾಷೆಯಲ್ಲಿ,"[2] ಹೀಗೆ ಕಾದಂಬರಿಕಾರ ಕೃತಿಯಲ್ಲಿ ವಸ್ತುವನ್ನು ವಿಶಿಷ್ಟಗೊಳಿಸಿ ಓದುಗನಿಗೆ ಅದು ವಿಶೇಷವಾಗಿ ನಿರ್ವಚಿಸುತ್ತಾನೆ. ಈ ನಿರ್ವಚನವನ್ನು ಅರ್ಥೈಸಿಕೊಳ್ಳುವುದು ನನ್ನ ಅಧ್ಯಯನ ಉದ್ದೇಶವಾಗಿದೆ.

ತೇಜಸ್ವಿಯವರ ಕಾದಂಬರಿಗಳಾದ 'ನಿಗೂಢ ಮನುಷ್ಯರು', 'ಸ್ವರೂಪ', 'ಕರ್ವಾಲೊ', ಹಾಗೂ 'ಚಿದಂಬರ ರಹಸ್ಯ' ಕೃತಿಗಳಲ್ಲಿ ಸಮಾಜದ ಪ್ರಜ್ಞೆ ಮತ್ತು ಕಾದಂಬರಿಗಳಲ್ಲಿ ಬರುವ

ನಿರೂಪಕನ ಆಲೋಚನೆಗಳು ಸಂಘರ್ಷಕ್ಕೆ ಒಳಗಾಗಿ ತನ್ನ ಮತ್ತು ಸಮಾಜದ 'ಆಗುವಿಕೆ'ಯ ಮೂಲಕ ಹುಡುಕುವ ಬದುಕಿನ ಕ್ರಮವನ್ನು ವರ್ತಮಾನಕ್ಕೆ ಯಾವ ರೀತಿ ಅಥವ ಕ್ರಮದಲ್ಲಿ ತೆರೆದು ತೋರಿಸುತ್ತಾನೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಇಲ್ಲಿ ಮುಖ್ಯವಾಗಿ ಕಾದಂಬರಿಗಳಲ್ಲಿ ಮೂಡಿಬಂದ ಅನುಭವದ ಶಿಖರಗಳನ್ನು ಹತ್ತಲು ಪ್ರಯತ್ನಿಸಿದಾಗ ಅನುಭವಗಳು ಜ್ಞಾನದ ಶಿಖರಗಳಾಗಿ ಕಾಣಿಸುತ್ತದೆ. ಅಂದರೆ ಅನುಭವಗಳನ್ನು ಒಳಹೊಕ್ಕು ನೋಡಿದಾಗ ಒಂದು ಕಾಲಮಾನದ ಸಮಷ್ಟಿಯ ಜ್ಞಾನ ಹೇಗೆ ಹೊರ ಹೊಮ್ಮುತ್ತದೆ ಎಂಬುದನ್ನು ಗುರ್ತಿಸಲಾಗಿದೆ. ವಾಸ್ತವವಾಗಿ ಕಾದಂಬರಿ ರೂಪುಗೊಳ್ಳುವ ಜೀವಂತವಾದ ವ್ಯಕ್ತಿಗಳ ಪರಸ್ಪರ ಕ್ರಿಯೆಯಲ್ಲಿಯೆ ಬದುಕಿನ ಬಗ್ಗೆ ತಾತ್ವಿಕ ನೆಲೆಯೊಂದು ಗಟ್ಟಿಯಾಗಲು ಕಾರಣವಾಗುತ್ತದೆ. "ಕೃತಿಕಾರನಿಗೆ ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ಜೀವನದ ಬಗೆಗಿನ ವಿಮರ್ಶಾ ನೋಟಗಳು ಹೊಸ ದರ್ಶನಗಳು ಏರ್ಪಡುತ್ತವೆ. ಕಾದಂಬರಿಯ ಲೋಕದಲ್ಲಿ ಬದುಕಿನ ರೀತಿಯು ಹಲವು ಸ್ತರಗಳು ವ್ಯಕ್ತಿಯು ತನ್ನ ಬದುಕಿನ ಜೊತೆಗೆ ಹೊಂದುವ ಸಂಬಂಧಗಳು ಕಾದಂಬರಿಯಲ್ಲಿ ಮೂಡುವ ಬಗೆಯು ಗಮನಾರ್ಹವಾದುದು."[3] ಒಟ್ಟಿನಲ್ಲಿ ಸಮಾಜ ಒಪ್ಪಿಕೊಂಡ ಸಾಂಸ್ಕೃತಿಕ ಲೋಕದಲ್ಲಿ ಮನುಷ್ಯ ಅನ್ಯ ಪ್ರಜ್ಞೆಯನ್ನು ತನ್ನಲ್ಲಿಯೇ ಸೇರಿಸಿಕೊಂಡು ತನ್ನ ಬದುಕನ್ನು ನೋಡ ಹೊರಟಾಗ ಅವನು ಅನುಭವಿಸುವ ಪರಕೀಯತೆ ಹಾಗೂ ಅಸ್ತಿತ್ವದ ಧೋರಣೆ ಮುಂತಾದವು ಹಾಗೂ ಅದನ್ನು ನಿರೂಪಿಸಲು ಹೋಗುವ ಕಾದಂಬರಿಕಾರನ ಅಭಿವ್ಯಕ್ತಿಯು ವಸ್ತುವಿಗೆ ತಕ್ಕಂತೆ ನಿರೂಪಣೆಯ ಶೈಲಿಯ ಬದಲಾಗುವಿಕೆ ಪರಸ್ಪರ ಪೂರಕವಾಗಿದೆ. ಹೀಗೆ ಹೊಸ ಕಾಲಮಾನಕ್ಕೆ ಹೊಸದಾಗಿ ತೆರೆದುಕೊಂಡ ಮನಸ್ಸು ಆ ವರ್ತಮಾನಕ್ಕೆ ಯಾವ ರೀತಿಯಲಿ ಪ್ರತಿಕ್ರಿಯೆ ನೀಡುತ್ತದೆ. ಮತ್ತು ಸೃಜನಶೀಲವಾಗಿ ನಿರೂಪಕ ತನ್ನ ಭಾಷೆಯನ್ನು ಹೇಗೆ ಪಳಗಿಸುತ್ತಾನೆ, ಹಾಗೂ ಪ್ರಯೋಗಿಸುತ್ತಾನೆ, ಅದರ ಮೂಲಕವಾಗಿ ವಸ್ತುವಿಗೆ ಬೇಕಾದ ತಂತ್ರ ಹೇಗೆ ಹುಡುಕುತ್ತಾನೆ. ಎಂಬುವುದನ್ನು ಪ್ರಧಾನ ಆಶಯವಾಗಿ ಇಟ್ಟುಕೊಂಡು ಕೃತಿಗಳನ್ನು ನೋಡಲಾಗಿದೆ.

ಕಾದಂಬರಿಯಲ್ಲಿ ಅನುಭವವನ್ನು ಹಿಡಿಯಲು ಹೋದ ಕಾದಂಬರಿಕಾರನಿಗೆ ಭಾಷೆಯನ್ನು ಪ್ರಯೋಗಿಸಲು ಮಾಡಿಕೊಂಡ ತಂತ್ರ ಹಾಗೂ ಕಾದಂಬರಿಯನ್ನು ಯಾವ ನೆಲೆಯಲ್ಲಿ ನಿಂತು ತನ್ನ ಬದುಕನ್ನು ಸಮಷ್ಟಿಯಾಗಿ ನಿರೂಪಿಸುತ್ತಿದ್ದಾನೆ. ಎನ್ನುವುದನ್ನು ಕಾದಂಬರಿಯ ಕಥಾ ಸಂವಿಧಾನ, ಅಭಿವ್ಯಕ್ತಿಯನ್ನು ಭಾಷಾ ಶೈಲಿಶಾಸ್ತ್ರದ ಮೂಲಕ ನೋಡಲಾಗಿದೆ. ಏಕೆಂದರೆ ಕಾದಂಬರಿಯಲ್ಲಿ ಮೂಡಿಬಂದ ಶೈಲಿಯ ಭಿನ್ನ ಸ್ತರಗಳು ಬಳಸಲಾದ ಧ್ವನಿಗಳು, ಭಾಷೆಯ ವಿಧಾನ, ಇವುಗಳೆಲ್ಲದರ ಸೂಕ್ಷ್ಮ ಅಧ್ಯಯನವಾಗದ ಹೊರತು ಕಾದಂಬರಿಯು

ಗ್ರಹಿಸಿದ್ದಿರಬಹುದಾದ ಸಾಮಾಜಿಕ ವೈಲಕ್ಷಣಗಳನ್ನು ಗುರುತಿಸಲು ಸಾಧ್ಯವಿಲ್ಲ. ಆದ್ದರಿಂದ ಕಾದಂಬರಿಯ ವಸ್ತು ಹಾಗೂ ತಂತ್ರದ ವಿಶ್ಲೇಷಣೆಯಲ್ಲಿ ಸಸ್ಸೂರನ ಸಂರಚನೆ, ಡೆರೀಡಾನ ನಿರಚನಾ ಸಿದ್ಧಾಂತ ಹಾಗೂ ಲೋಹಿಯಾ ಚಿಂತನೆಗಳನ್ನು ಬಳಸಿಕೊಂಡು ಕೃತಿಯ ಒಳಪ್ರವೇಶ ಮಾಡಲಾಗಿದೆ. ವಸ್ತುವನ್ನು ಹಿಡಿದು ನಿರೂಪಿಸುವ ಕಾದಂಬರಿಕಾರ ನಿರ್ಮಿಸಿಕೊಳ್ಳುವ ಕಾದಂಬರಿಯ ಪರಿಸರ, ಪ್ರಾದೇಶಿಕತೆ, ವೈಚಾರಿಕತೆ ಹಾಗೂ ವಾಸ್ತವದ ತಂತ್ರಗಳನ್ನು ನಿರ್ವಹಿಸುವ ಕಾದಂಬರಿಯ ಸಂರಚನೆಯನ್ನು ಸೀಳಿ ಕೃತಿ ತನ್ನನ್ನು ತಾನೇ ಒಳ ಧ್ವನಿಗಳ ಮೂಲಕ ವಿರಚಿಸಿಕೊಳ್ಳುತ್ತದೆ ಎಂಬುದನ್ನು ಗಮನಿಸುವುದೆ ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

ಒಟ್ಟಾರೆಯಾಗಿ ಕಾದಂಬರಿಕಾರನ ದೃಷ್ಟಿಕೋನಕ್ಕೆ ತಕ್ಕಂತೆ ಕಥೆ ಬೆಳೆಯುತ್ತದೆ. ನಿರೂಪಣೆ ಅದಕ್ಕೆ ಸಾಕ್ಷಿ ಪ್ರಜ್ಞೆಯಾಗುತ್ತದೆ. ನಿರೂಪಣೆ ಬೆಳೆದಂತೆ ಘಟನೆಗಳ ಕ್ರಿಯೆ ಬದಲಾಗುತ್ತದೆ. ಸಂವಿಧಾನ ಪೋಷಣೆಯಲ್ಲಿ ಅಭಿವ್ಯಕ್ತಿ ಕ್ರಮವು ಪೋಷಕವಾಗುತ್ತದೆ. ಕೊನೆಗೆ ಕುತೂಹಲ ಹುಟ್ಟಿಸುವುದರ ಮೂಲಕ ಪಾತ್ರಕ್ಕೆ ತಕ್ಕ ಭಾಷೆಯನ್ನು ಸಮರ್ಪಕವಾಗಿ ಬಳಸಿಕೊಂಡು ತಾನು ನಿರೂಪಣೆಯಲ್ಲಿ ಓದುಗನಿಗೆ ಯಾವುದೋ ಸಂದೇಶ ರವಾನಿಸುವುದರ ಮೂಲಕ ಕಾದಂಬರಿಯ ವಸ್ತುವನ್ನು ವಿಸ್ತರಿಸಿ ಅದಕ್ಕೆ ಬೇಕಾದ ಸೂಕ್ತ ವಾತಾವರಣ ನಿರ್ಮಿಸಿ ಅಂತ್ಯಕ್ಕೆ ಚಲಿಸುತ್ತಾನೆ. ಇದನ್ನು ಕಾದಂಬರಿಯ ಕೇಂದ್ರ ಎಂದು ಹೇಳಬಹುದು.

ಅಡಿಟಿಪ್ಪಣಿ


1. ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ, ಎಲ್.ಎಸ್.ಶೇಷಗಿರಿರಾವ್, 2008 ಪುಟ 8 ಮತ್ತು 9
2. ಕಾದಂಬರಿ ಮೀಮಾಂಸೆ, ಡಾ.ಸುರೇಶ ಪಾಟೀಲ, 2011 ಪುಟ 74
3. ವಿಮರ್ಶೆಯ ಪರಿಭಾಷೆ, ಓ.ಎಲ್. ನಾಗಭೂಷಣ ಸ್ವಾಮಿ, ಅಂಕಿತ ಪುಸ್ತಕ, ಬೆಂಗಳೂರು 2009 ಪು 18

# ಅಧ್ಯಾಯ–2

## ಸಸ್ಯೂರ್ ರೂಪಿಸಿದ ಸಂರಚನಾ ಸಿದ್ಧಾಂತ

ಪ್ರತಿಯೊಂದು ಕಥೆ ಹಾಗೂ ಕಾದಂಬರಿ ನಿರ್ಮಾಣವಾಗುವ ಸಂದರ್ಭದಲ್ಲಿ ರಚನೆಗೆ ಸಂಬಂಧಿಸಿದಂತೆ ಕೃತಿಕಾರ ನಿರ್ಮಿಸುವ ಭಾಷೆಯ ಹೊರ ಚೌಕಟ್ಟೇ ಸಂರಚನೆ. ಅಥವ ಕಾದಂಬರಿಕಾರ ನಿರ್ವಹಿಸುವ ಕಾದಂಬರಿಯ ಕಥಾ ವಸ್ತುವಿಗೆ ಒಂದು ಚೌಕಟ್ಟು ನಿರ್ಮಿಸಿ ಅದಕ್ಕೆ ಒಂದು ಭಾಷಿಕ ರಚನೆಯನ್ನು ನೀಡುತ್ತಾನೆ. ಈ ಸಂರಚನೆಯು ತಾತ್ವಿಕವಾಗಿ ಲೋಕ ಗ್ರಹಿಕೆ ಮತ್ತು ಲೋಕ ವಿವರಣೆಗಳ ಒಂದು ದೃಷ್ಟಿಕೋನ. ಈ ರಚನೆಗೆ ಆಯಾ ಸಮಾಜ ವ್ಯವಸ್ಥೆ ಒಪ್ಪಿಕೊಂಡಿರುವ ಭಾಷಾ ನಿಯಮಾನುಸಾರ ಕೃತಿ ರಾಚನಿಕತೆಗೆ ಒಳಗಾಗುತ್ತದೆ. ಆದರೆ ಕಥಾವಸ್ತುವಿನ ಈ ರಚನೆ ಅಮೂರ್ತವಾದ, ಯಾದೃಚ್ಚಿಕ ಹಾಗೂ ಸಂಜ್ಞೆಯ ಪರಿಕಲ್ಪನೆಯಾಗಿರುತ್ತದೆ. ಹೀಗೆ ಕಥಾವಸ್ತುವಿನ ಪ್ರಾರಂಭ ಬೆಳವಣಿಗೆಯನ್ನು ಒಪ್ಪಿಕೊಂಡು ಕೃತಿ ಅಂತ್ಯಕ್ಕೆ ಚಲಿಸುತ್ತದೆ.

ಕಾದಂಬರಿಯ ವಸ್ತು ವರ್ತಮಾನ ಸಮಾಜ ಒಪ್ಪಿಕೊಂಡಿರುವ ಭಾಷೆಯನ್ನು ಆಯ್ಕೆ ಮಾಡುವುದರ ಮೂಲಕ ವಾಸ್ತವತೆಯ ನೋಟವನ್ನು ಓದುಗನಿಗೆ ನೀಡುತ್ತದೆ. ಏಕೆಂದರೆ ಕಾದಂಬರಿಕಾರ ತನ್ನ ಸುತ್ತ ಮುತ್ತಲಿನ ಸಮಾಜದಿಂದ ಪಡೆದ ಅನುಭವಗಳಿಂದಲೇ ಕಾದಂಬರಿಯ ಚೌಕಟ್ಟಿನ ಪ್ರೇರಣೆಯನ್ನು ಪಡೆಯುತ್ತಾನೆ. ಹೀಗೆ ರೂಪಿಸಲಾದ ಕಾದಂಬರಿಯ ಲೋಕದಲ್ಲಿ ವಾಸ್ತವ ಲೋಕದ ಮಾದರಿಗಳು ಇರುತ್ತವೆ. ಹಾಗೂ ಕಾದಂಬರಿಯ ಸಂರಚನೆಯ ರೂಪವೆಂಬುದು ಓದುಗನಲ್ಲಿ ನಿರ್ದಿಷ್ಟ ಅರ್ಥ ಪರಂಪರೆಯನ್ನು ಮೂಡಿಸುವ ಅಥವ ಉತ್ಪಾದಿಸುವ ಸಾಮರ್ಥ್ಯವನ್ನು ಹೊಂದಿರುವ ಭಾಷಿಕ ರಚನೆಯಾಗಿರುತ್ತದೆ. ಈ ಹಿನ್ನಲೆಯಲ್ಲಿ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಯವರ ಕಾದಂಬರಿಗಳು ಸಮಾಜ, ವೈಜ್ಞಾನಿಕ ಹಾಗೂ ಪಾತ್ರ ಪ್ರಧಾನವಾದ ಮೂಲಧ್ವನಿಯನ್ನೇ ವಸ್ತುವನ್ನಾಗಿ ಆಯ್ಕೆ ಮಾಡುತ್ತವೆ. ಹಾಗೂ ಆ ವಸ್ತುವಿಗೆ ಬೇಕಾದ ಹುಡುಕಾಟದ ಪರಿಸರವನ್ನು ನಿರ್ಮಿಸುತ್ತವೆ. ಇಲ್ಲಿ ಪರಿಸರವೆಂದರೆ ಅಭಿವ್ಯಕ್ತಿಯ ಉತ್ಪಾದನೆಗೆ ನಿರ್ಮಿಸಿಕೊಳ್ಳುವ ಪರಿಸರವೆಂದು ತಿಳಿಯಲಾಗಿದೆ.

ಸಸ್ಯೂರನ ಚಿಂತನೆಗಳಲ್ಲಿ ಮುಖ್ಯವಾಗಿ 'ನಾಮಕರಣ ವ್ಯವಸ್ಥೆ' ಎಂಬ ವಿಭಾಗವನ್ನು ಗ್ರಹಿಸಲಾಗಿದೆ.[1] ಅದರ ಅನ್ವಯ ಮನಸ್ಸು, ಜಗತ್ತು ಮತ್ತು ಭಾಷೆಯ ಪದಗಳ ಸಂಬಂಧದ ಬಗೆಗೆ ಸಮರ್ಪಕವಾದ ವಿವರಗಳಿಲ್ಲ. ಮಾನವರು ತಲೆಯಲ್ಲಿ ಮೊದಲೇ ಇರುವ ಕಲ್ಪನೆಗಳಿಗೆ ಪದಗಳ ರೂಪವನ್ನು ಕೊಡುತ್ತಾರೆ. ಇಲ್ಲಿ ಮನಸ್ಸು ಮೊದಲು ಭಾಷೆ ಅನಂತರದ್ದು ಎಂದು ನಂಬಲಾಗಿದೆ.

ಅಂದರೆ ಮನಸ್ಸಿನ ಆಲೋಚನೆಗಳಿಗೆ ಪದಗಳ ರೂಪವನ್ನು ಕೊಡುವುದೋ? ಅಥವ ಪದಗಳಿಗೆ ತಕ್ಕ ಹಾಗೆ ಮನಸ್ಸಿನ ಆಲೋಚನೆಗಳನ್ನು ಪರಿವರ್ತಿಸಿ ಕೊಳ್ಳುವುದೋ ಎಂಬುದೇ ಇಲ್ಲಿಯ ಸಮಸ್ಯೆ ಇಂಥಲ್ಲಿ ಸಮಸ್ಯೆಯನ್ನು ಕಗ್ಗಂಟು ಮಾಡಿಕೊಳ್ಳುವುದಕ್ಕಿಂತಲೂ ಇವೆರಡೂ ನಿರಂತರ ಪ್ರಕ್ರಿಯೆಯಲ್ಲಿ ಒಂದು ಇನ್ನೊಂದರಿಂದ ಪ್ರಭಾವಗೊಳ್ಳುತ್ತಿರುತ್ತದೆ. ಎಂದು ಪರಿಭಾವಿಸುವುದು ಸೂಕ್ತ ಈ ಗ್ರಹಿಕೆಯ ಮೂಲಕ ತಿಳಿದು ಬರುವ ಅಂಶವೆಂದರೆ ಈ ಲೋಕದಲ್ಲಿ ಸ್ವತಂತ್ರ ಅಸ್ತಿತ್ವವಿರುವ ವಸ್ತುಗಳೆಲ್ಲ. ವೀಕ್ಷಣೆಯ ವಿಧಾನದಿಂದಷ್ಟೆ ವಸ್ತುಗಳು ಸ್ವತಂತ್ರವೆಂಬಂತೆ ತೋರುತ್ತವೆ. ಅಂದರೆ ವಸ್ತುಗಳ ಸತ್ಯತ್ವ ವಸ್ತುಗಳಲ್ಲಿಲ್ಲ. ನಾವು ಬೇರೆ ಬೇರೆ ವಸ್ತುಗಳ ನಡುವೆ ಇರುವ ಸಂಬಂಧವನ್ನು ರಚಿಸಿ, ಗ್ರಹಿಸುವುದರಲ್ಲಿದೆ. ಸತ್ಯವೆಂದರೆ ವಸ್ತುವಲ್ಲ, ವಸ್ತುಗಳ ನಡುವಿನ ಸಂಬಂಧಗಳ ಸ್ವರೂಪದ ಗ್ರಹಿಕೆ. ಯಾವುದೇ ವಸ್ತುವು ಒಳಗೊಂಡಿರುವ ವಿವಿಧ ಅಂಶಗಳಿಗೆ ಸ್ವತಂತ್ರವಾದ ಅರ್ಥವಿರುವುದಿಲ್ಲ. ಅಂಶಗಳಿಗೂ ಇಡೀ ವಸ್ತುವಿಗೂ ಇರುವ ಸಂಬಂಧದಿಂದ ಮಾತ್ರ ಅಂಶವು ಪರಿಪೂರ್ಣವಾಗುತ್ತದೆ.

ಡಾ.ಸುರೇಶ ಪಾಟೀಲ ರವರು ದಾಖಲಿಸಿರುವಂತೆ "ಕಾದಂಬರಿ ಪ್ರಕಾರವನ್ನು 'ಕಥನ ಮುಂದುವರಿಕೆ' ಎಂದು ಹೇಳಬಹುದಾಗಿದೆ. ಹಾಗೆ ನೋಡಿದರೆ 'ಕಥನ'ವೆನ್ನುವುದು ಒಂದು ಮಾಧ್ಯಮ' ಆದ್ದರಿಂದ ಆ ಮೂಲಕವೇ ಕಾದಂಬರಿಯ ಒಳಪ್ರಪಂಚ ಸಂರಚನೆಯನ್ನು ಕಾಣಬೇಕಾಗುವುದು ವಸ್ತು, ಸಂವಿಧಾನ, ಪಾತ್ರ ಚಿತ್ರಣ, ಸನ್ನಿವೇಶ ನಿರ್ಮಾಣ ದೃಷ್ಟಿಕೋನ, ವೈಚಾರಿಕತೆ, ವರ್ಣನೆ, ಭಾಷೆ ಇತ್ಯಾದಿ ಅನೇಕ ಅಂಶಗಳು ಕಾದಂಬರಿಯ ಒಳಜಗತ್ತನ್ನು ನಿರ್ಮಿಸಿವೆ".[2] ಕಥೆ ಕಥಿತವಾಗುತ್ತಿರುವ ಕ್ರಮದಲ್ಲಿಯೆ ಕಟ್ಟಿಕೊಳ್ಳುತ್ತದೆ. ಕಥೆ ಒಂದನ್ನು ಹೇಳುತ್ತಿದ್ದರೆ ಕಥನ ಬೇರೊಂದನ್ನು ಹೇಳುತ್ತಿರಬಹುದೆಂದು ಸೂಚಿಸುತ್ತದೆ. ಕಥೆ ಹಾಗೂ ಕಥನಗಳ ನಡುವಿನ ಈ ಚಲನಶೀಲತೆ ಅಂತಿಮವಾಗಿ ಮತ್ತೊಂದು ಅನುಭವವನ್ನು ನಿರ್ಮಿಸುತ್ತದೆ. ಕರ್ವಾಲೋ ಕಾದಂಬರಿಯಲ್ಲಿ ಪರಿಚಯಿಸುತ್ತಿರುವ ಹಾರುವ ಓತಿಯ ಜಗತ್ತು ವಿಸ್ಮಯಕ್ಕೆ ಹಾಗೂ ಅದ್ಭುತಕ್ಕೆ ಸಂಕೇತವಾಗಿ ವಿಸ್ತರಿಸುತ್ತದೆ. ಕಥಾ ನಿರೂಪಣೆ ಪರಿಚಯಿಸಬೇಕಾದ ಹಾರುವ ಓತಿ ಹಾಗೂ ಎಷ್ಟೋ ಸಹಸ್ರ ವರ್ಷಗಳ ಇತಿಹಾಸವನ್ನು ತುಂಬಿಕೊಂಡು ಯಾರ ಕಣ್ಣಿಗೂ ಕಾಣದಂತೆ ಇರುವುದನ್ನು 'ಕಣ್ತೆರೆದು' ನೋಡುವುದಕ್ಕೆ ಸಾಗುವ ನಿರೂಪಣೆ, ಓತಿಯನ್ನು ಕಾಣುವಿಕೆಗೆ ಹೋದಾಗ ನಡೆಯುವ ಅನುಭವದ ಅಭಿವ್ಯಕ್ತಿಯೇ ಕವಾಲೋ ಕಾದಂಬರಿಯಾಗಿದೆ.

ಈ ಕಾದಂಬರಿಯನ್ನು ಕಥಿಸುವ ಸಂದರ್ಭದಲ್ಲಿ ನಿರೂಪಣೆಯ ಕ್ರಿಯೆ ಅವನತಿಯ ಅಂಚಿನಲ್ಲಿರುವ ಹಾರುವ ಓತಿಯನ್ನು ಅದರ ಮೂರರ ಮುಂದೆ ಏಳು ಸೊನ್ನೆಗಳನ್ನು ಹಾಕಿದರು ಅದರ ಹಿಂದಕ್ಕೆ ಸಾಗುವ ಓತಿ ಪರಿಚಯ ವರ್ತಮಾನದಲ್ಲಿ ಕರ್ವಾಲೊರವರಿಂದ ನಿರೂಪಕ

ಪರಿಚಯಿಸಿಕೊಳ್ಳಲು ಸಾಗುತ್ತಾನೆ. ಓತಿಯ ಪರಿಚಯವನ್ನು ಮಂದಣ್ಣ ಮಾಡಿಕೊಂಡರು, ಅವನ ಜ್ಞಾನವನ್ನು ಅರಿಯದ ಅದೇ ವರ್ಗದ ಜನ ಅವನನ್ನು ಗ್ರಹಿಸುವ ರೀತಿ "ಹುಳ ಹುಪ್ಪಟೆ ಹಿಡಿಯುವವನೆಂದು" ಹೀಗೆ ಅವನ ಕೀಟ ಪ್ರಜ್ಞೆಯನ್ನು ಅಲಕ್ಷಿಸುವ ಸಮಾಜ ಹಾಗೂ ಅದೇ ವರ್ಗದಲ್ಲಿಯೇ ಬರುವ ಎಂಕ್ಟನ ಜ್ಞಾನವನ್ನು ಅರಿಯದೆ ಓತಿಯ ಅವನತಿ ಹಾಗೂ ಇವರಿಬ್ಬರ ಕೀಟಜ್ಞಾನದ ಅವನತಿ ಎರಡು ಒಂದೇ ರೀತಿಯಾಗಿರುವುದನ್ನು ಗಮನಿಸಬಹುದು.

'ಚಿದಂಬರ ರಹಸ್ಯ' ಕೃತಿಯಲ್ಲಿಯು ಕೋಮುವಾದ, ಮತೀಯವಾದಗಳ ಮೂಲಕ ಕೆಸರೂರಿನಲ್ಲಿರುವ ಜನರ ಮಾನಸಿಕ ವಿಕಾರಗಳಿಗೆ ತೆರೆದುಕೊಂಡ ಜನರಿಂದ ಸಂಪೂರ್ಣವಾಗಿ ಹಾಳಾಗುವುದರ ಕಡೆಗೆ ಚಲಿಸುತ್ತಿದ್ದರು ಅದನ್ನು ಮೀರಿ ವಿಕಾರಗಳಿಲ್ಲದ ಆದರ್ಶ ಸಮಾಜದೆಡೆಗೆ ಮುಖ ಮಾಡಿ ನಿಲ್ಲುವ ಪ್ರೇಮವೆಂಬ ಮಾಂತ್ರಿಕ ಶಕ್ತಿಗೆ ಅದು ಸಾಧ್ಯವೆನ್ನುವುದನ್ನು ಕಥಿತವಾಗುತ್ತಿರುವ ವಸ್ತುವಿನಲ್ಲಿಯೇ ಹೇಳುತ್ತಿರುವುದನ್ನು ಕಾಣಬಹುದಾಗಿದೆ. ಏಕೆಂದರೆ ಹೇಳುತ್ತಿರುವ ಅನುಭವ ಭಾಷಿಕ ರಚನೆಯಲ್ಲಿ ಸಂಜ್ಞೆಗಳನ್ನು ಬರೆದಾಗ ಅಥವ ಉಚ್ಚರಿಸಿದಾಗ ಅವು ಕೇವಲ ಶಾಹಿಯ ಗುರುತುಗಳಾಗಲೀ, ಶಬ್ದಗಳಾಗಲೀ ಅರ್ಥವಲ್ಲ. ಬದಲಿಗೆ ಅವುಗಳನ್ನು ಹೊರೆತು ಪಡಿಸಿದ ವಿಚಾರಗಳನ್ನು ನಮ್ಮ ಮನಸ್ಸಿಗೆ ಹೊಳೆಯಿಸುತ್ತದೆ. ಆದುದರಿಂದಲೇ ಪದಗಳು ಕೂಡ ಸಂಜ್ಞೆಗಳಾಗುತ್ತವೆ. ಸಂಜ್ಞೆಗಳು ಕೃತಿಯಲ್ಲಿ ತನ್ನನ್ನು ಮರೆಮಾಡಿ ಬೇರೆಯದರ ಬಗೆಗೆ ತಿಳಿಸುತ್ತದೆ. ಹಾಗೂ ವಿಚಾರಗಳನ್ನು ವ್ಯಕ್ತ ಪಡಿಸಲು ನೆರವಾಗುವಂತೆ ವ್ಯವಸ್ಥೆಗೊಂಡಿರುವ ಸಂರಚನೆಯೇ ಭಾಷೆಯಾಗಿರುತ್ತದೆ. ಇದರಲ್ಲಿ ಎರಡು ಮಾದರಿಗಳನ್ನು ಸಸ್ಯೂರ್ ಹುಡುಕುತ್ತಾನೆ.

- ಒಂದು ಅನುಕ್ರಮಾತ್ಮಕ ಸಂಬಂಧ
- ಮತ್ತೊಂದು ಸಾಹಚರ್ಯಾತ್ಮಕ ಸಂಬಂಧ

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪದಗಳು ಅಥವ ಪದದ ಆಯ್ಕೆಯನ್ನು ಸಾಹಚರ್ಯಾತ್ಮಕವೆಂದು ಹಾಗೂ ವಾಕ್ಯ ಸಂಯೋಜನೆಯನ್ನು ಅನುಕ್ರಮಾತ್ಮಕವೆಂದು ಸೂಚಿಸುತ್ತಾನೆ. ಮುಂದುವರೆದು ಸಸ್ಯೂರ್ ಪದಗಳನ್ನು ಭಾಷಿಕ ಸಂಜ್ಞೆಗಳೆಂದು ಕರೆದನ್ನು ಒಂದೊಂದು ಸಂಜ್ಞೆಯಲ್ಲೂ ಪರಿಕಲ್ಪನೆ ಹಾಗೂ ಶ್ರವಣಬಿಂಬ ಎಂಬ ಎರಡು ಅಂಶಗಳಿರುತ್ತವೆ. ಇವುಗಳನ್ನು ಕ್ರಮವಾಗಿ

1. ಪರಿಕಲ್ಪನೆಯನ್ನು – ಸೂಚಿತವೆಂದು
2. ಶ್ರವಣಬಿಂಬವನ್ನು – ಸೂಚಕವೆಂದು ಕರೆಯುತ್ತಾನೆ.

ಭಾಷೆಯು ಒಂದು ರೂಪವೇ ಹೊರೆತು ವಸ್ತುವಲ್ಲ. ಸೂಚಕ ಸೂಚಿತಗಳನ್ನೆ ಪರಿಗಣಿಸಲಿ ಭಾಷೆಯಲ್ಲಿ ಇತ್ಯಾತ್ಮಕವೆಂದು ಕರೆಯಬಹುದಾದದ್ದು ಏನು ಇಲ್ಲ. ಭಾಷಾ ವ್ಯವಸ್ಥೆಯೊಳಗೆ ವ್ಯತ್ಯಾಸಗಳನ್ನು ಆಧರಿಸಿ ಹುಟ್ಟುವ ಸಂಬಂಧಗಳಿಂದ ಅರ್ಥ ಮೂಡುತ್ತದೆಯೇ ಹೊರೆತು ಭಾಷಾ ವ್ಯವಸ್ಥೆಯ ಆಚೆಗೆ ಅಥವ ಭಾಷಾ ವ್ಯವಸ್ಥೆಯ ಮುನ್ನ ಅರ್ಥವೆಂಬುದು ಇರಲು ಸಾಧ್ಯವಿಲ್ಲವೆಂದು ಸಸ್ಯೂರ್ ಹೇಳುತ್ತಾನೆ.

ಈ ಮಾತುಗಳನ್ನು ಹಿಡಿದು ಕೃತಿ ಪ್ರವೇಶ ಮಾಡಿದರೇ, ಕೃತಿ ರಚನೆಯಾಗುತ್ತಿರುವ ಸಂದರ್ಭದಲ್ಲಿ ಕೃತಿಕಾರ ನಿರ್ಮಿಸುವ ಪದಗಳು ಅದರ ಮೂಲಕ ನಿರ್ಮಾಣವಾಗುವ ವಾಕ್ಯಗಳು ತುಂಬಾ ಮುಖ್ಯವಾಗಿ ಕ್ರಿಯೆಯನ್ನು ನಿರ್ಮಿಸುತ್ತವೆ. ಆದರೆ ಆ ಕ್ರಿಯೆಗೆ ಮೌಖಿಕವಾಗಿ ಅಥವಾ ಲಿಖಿತವಾಗಿ ಬರೆದಾಗ ಅದು ಭಾಷಿಕ ಲೋಕದ ಆಚೆಗೆ ನಿರ್ಧರಿಸುವ ಅರ್ಥವಾಗಿರುತ್ತದೆ. ಅಂದರೆ ಆ ಅರ್ಥವೆಂಬುದು ಆ ಪಾರಂಪರಿಕ ಲೋಕ ನಿರ್ಧರಿಸುವ ಅಂಶವಾಗಿ ಗ್ರಹಿಸಲಾಗುತ್ತದೆ. ಕರ್ವಾಲೋ ಕಾದಂಬರಿಯ 'ಹಾರುವ ಓತಿ' ನಿಗೂಢ ಮನುಷ್ಯರು ಕೃತಿಯಲ್ಲಿ ಬರುವ 'ಉಗ್ರಗಿರಿ' ಚಿದಂಬರ ರಹಸ್ಯ ಕೃತಿಯಲ್ಲಿ ಮೂಡಿಬಂದಿರುವ 'ಏಲಕ್ಕಿ ಗಿಡ' ಈ ಪದಗಳನ್ನು ಹೇಳಿದಾಗ ಬರೆದಾಗ ಅದಕ್ಕೆ ಯಾವುದೇ ಅಂದರೆ ನಿಘಂಟುವಿನ ಅರ್ಥವನ್ನು ಆರೋಪಿಸ ಬಹುದು ಆದರೆ ಅದು ಒಂದು ಉದ್ದೇಶಕ್ಕೆ ಕೃತಿಯಲ್ಲಿ ಬಂದು ಸೇರಿದಾಗ ಇಡೀ ಕೃತಿಯಲ್ಲಿ ಈ ಪದಗಳು ಪಡೆಯುವ ಅರ್ಥವೇ ಬೇರೆಯಾಗುತ್ತದೆ. ಹಾಗೂ ಈ ಪದಗಳು ತನ್ನ ಅಂದರೆ ನಿಘಂಟಿನ ಅರ್ಥವನ್ನು ಬಿಟ್ಟುಕೊಟ್ಟು ಇನ್ನೊಂದು ಅರ್ಥದ ಕಡೆಗೆ ತನ್ನನು ತಾನೇ ತೆರೆದುಕೊಂಡು ವಿಸ್ತರಿಸಿ ಕೊಳ್ಳುತ್ತವೆ. ಆದರೆ ಅದೇ ಪದಗಳು ಕೃತಿಯಿಂದ ಹೊರ ತೆಗೆದರೆ ಆ ಪದಗಳು ತಮ್ಮ ಅರ್ಥವನ್ನು ಕಳೆದುಕೊಂಡು ಯಾವುದೇ ಪರಿಣಾಮ ವಿಲ್ಲದ ಪದಗಳಾಗಿ ತೋರುತ್ತದೆ.

ಸ್ವಿಸ್ ಭಾಷಾಶಾಸ್ತ್ರಜ್ಞ ಫರ್ಡಿನಾಂಡ್ ಡಿ. ಸಸ್ಯೂರನೆಯ ಪ್ರತಿಪಾದನೆಗಳು ಈ ರೀತಿಯಾಗಿವೆ

- ಭಾಷೆಯನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡುವುದಕ್ಕಿಂತ ವರ್ತಮಾನ ಕಾಲದ ಪ್ರಚಲಿತ ಭಾಷಾ ಸ್ಥಿತಿಯನ್ನು ಅರಿಯುವುದರಿಂದ ಮಾತ್ರ ಅದರ ಸ್ವರೂಪ ಹಾಗೂ ಲಕ್ಷಣವನ್ನು ತಿಳಿಯಬಹುದಾಗಿದೆ.

- ಲಾಂಗ್ ಮತ್ತು ಪರೋಲ್ – ಇದನ್ನು ಕ್ರಮವಾಗಿ ಭಾಷೆ ಮತ್ತು ಮಾತು ಎಂದು ತಿಳಿಯಬಹುದು. ಲಾಂಗ್ ಎಂದರೆ ಭಾಷೆಯು ಒಳಗೊಂಡಿರುವ ಅರ್ಥವಂತಿಕೆಯ ನಿಯಮವಾಗಿದೆ. ಹಾಗೂ ಅಮೂರ್ತವಾದದ್ದು ಪರೋಲ್ ಎಂದರೆ ನಿಯಮವನ್ನು ನಾವು ಉಪಯೋಗಿಸುವ ಹಂತವಾಗಿದೆ. ಅಂದರೆ ವ್ಯಕ್ತಿಯು ಭಾಷೆಯ ಮೂಲಕ ಇದನ್ನು ಸಾಧ್ಯವಾಗಿಸುತ್ತಾನೆ. ಇದು ಭಾಷೆಯನ್ನು ಕಲಿಯುವಾಗ ಸಂಗ್ರಹಿಸುವ ನಿಯಮವಾಗಿರುತ್ತದೆ. ಒಂದೊಂದು ಭಾಷಿಕ ಸಮೂದಾಯವೂ ಈ ನಿಯಮವನ್ನು ಪರಂಪರೆಯಿಂದ ಪರಂಪರೆಗೆ ಕಾದುಕೊಂಡು ಬಂದಿರುತ್ತದೆ. ಅಲ್ಲದೆ ಅದು ಆ ಮೂಲಕ ಪ್ರತಿಯೊಬ್ಬ ಭಾಷಿಕನ ತಲೆಯಲ್ಲಿರುತ್ತದೆ. ಉದಾಹರಣೆಗೆ – ಕನ್ನಡವನ್ನು ಆಡುವವರಿಗೆಲ್ಲ ಆ ಭಾಷೆಯ ಇತಿಹಾಸ ತಿಳಿದಿರಬೇಕಿಲ್ಲವಷ್ಟೆ. ಆದರೂ ಅವರ ಮಾತು ಪರಸ್ಪರ ಅರ್ಥವಾಗುವುದಕ್ಕೆ ಸಹಾಯಕವಾದ ಕೆಲವು ಅವ್ಯಕ್ತ ನಿಯಮಗಳ ಮೊತ್ತವೇ ಲಾಂಗ್ ಅಥವ ಭಾಷೆ. ಇಲ್ಲಿ ಭಾಷಿಕ ನಿಯಮ ಎಂಬುದನ್ನು ಈಗ ನಾವು ಬಳಸುವ ವ್ಯಾಕರಣ ನಿಯಮಕ್ಕೆ ಸಂವಾದಿಯಾಗಿ ತಿಳಿಯಬಾರದು ಅದು ವ್ಯಾಕರಣವೇ ಹೌದಾದರೂ ಶಾಲೆಯಲ್ಲಿ ಅಥವ ಪಠ್ಯ ಪುಸ್ತಕದಿಂದ ಕಲಿಯುವ ವ್ಯಾಕರಣವಲ್ಲ. ಈಗಾಗಲೇ ಹೇಳಿದಂತೆ ಅದು ಭಾಷಾ ಸಮುದಾಯವೊಂದು ಪರಂಪರೆಯಿಂದ ಪರಂಪರೆಯವರೆಗೆ ಕಲೆ ಹಾಕಿರುವ ಒಂದು ಶಕ್ತಿ. ಬಿಡಿ ವ್ಯಕ್ತಿಗಳ ಮಾತು ಪರೋಲ್. ಭಾಷೆಯೆಂಬುದು ಮಾತಿನಾಚೆಗೆ ಇದ್ದು, ಮಾತಿನಲ್ಲಿ ಭಾಗಶಃ ವ್ಯಕ್ತವಾಗುವ, ಮಾತಿಗೆ ಅರ್ಥ ಪ್ರಧಾನ ಮಾಡುವ ವ್ಯವಸ್ಥೆ.

- ಭಾಷೆಯ ಯಾವುದೇ ಒಂದು ಘಟಕ ಸ್ವತಂತ್ರವಲ್ಲ. ಅದು ಇನ್ನಿತರ ಘಟಕಗಳೊಂದಿಗೆ ಹೊಂದಿರುವ ಸಂಬಂಧ ಅಥವ ವ್ಯತ್ಯಾಸವನ್ನು ಆಧರಿಸಿ ಅರ್ಥಪೂರ್ಣವಾಗಿದೆ ನಿದರ್ಶನಕ್ಕೆ ಕಾಮ ಮತ್ತು ರಾಮ ಎಂಬ ಪದಗಳ ಅರ್ಥ ಭಿನ್ನವಾಗಿರುವುದಕ್ಕೆ ಕಾರಣ 'ಕಾ' ಮತ್ತು 'ರಾ' ಗಳ ವ್ಯತ್ಯಾಸ, ರಮ ಮತ್ತು ಮರಗಳ ಅರ್ಥ ವ್ಯತ್ಯಾಸಕ್ಕೆ 'ರ' ಮತ್ತು 'ಮ' ಗಳ ಸ್ಥಾನಗಳ ವ್ಯತ್ಯಾಸವೇ ಕಾರಣ. ಅಂದರೆ ಪದವೊಂದರ ಅರ್ಥವೆನ್ನುವುದು ಆ ಪದದೊಳಗಿನ ಧ್ವನಿಗಳ ವ್ಯತ್ಯಾಸ ಮತ್ತು ಅಂಥದೇ ಧ್ವನಿಗಳನ್ನು ಹೊಂದಿರುವ ಇತರ ಪದಗಳ ಧ್ವನಿಗಳ ವ್ಯತ್ಯಾಸವನ್ನು ಆಧರಿಸಿರುತ್ತದೆ. ಇದು ಸ್ಥೂಲವಾಗಿ ಧ್ವನಿ ಸಂರಚನೆ. ಈ ಸಿದ್ಧಾಂತವನ್ನು ಇಟ್ಟುಕೊಂಡು ಕೃತಿಯಲ್ಲಿ ವಿಹರಿಸಿದರೆ ಕೃತಿಯಲ್ಲಿ ರಚನೆಯಾದ ಒಂದು ಸಂದರ್ಭವನ್ನು ಪ್ರತ್ಯೇಕವಾಗಿ ತೆಗೆದುಕೊಂಡು ನೋಡಿದಾಗ ಅದು ಸ್ವತಂತ್ರ್ಯವಾದ ಘಟಕವಾಗಿ ಕಾಣಿಸುವುದಿಲ್ಲ. ಏಕೆಂದರೆ ಆ ಸಂದರ್ಭದಲ್ಲಿ ನಡೆದ ಘಟನೆ ಇನ್ನಿತರ ಘಟನೆಗಳ ಜೊತೆಗೆ ಸಂದರ್ಭವೆಂಬುದೊಂದು

ನಿರ್ಮಾಣವಾಗುತ್ತದೆ. ಅಂದರೆ ಒಂದು ಸಂದರ್ಭ ನಿರ್ಮಾಣವಾಗಬೇಕಾದರೆ ಅದು ಬೇರೆ ಬೇರೆ ಸಂದರ್ಭಗಳ ಜೊತೆಗೆ ನುಸುಳಿಕೊಂಡು ಅದರ ಜೊತೆಗೆ ತನ್ನ ಸಂಬಂಧವನ್ನು ಇಟ್ಟುಕೊಂಡಿರುತ್ತದೆ. ಅದನ್ನು ಬಿಡಿಸಲು ಹೋದಾಗ ಸಮಸ್ಯೆ ಎಷ್ಟು ಗಟ್ಟಿಯಾದ ಬಂಧವಾಗಿರುತ್ತದೆ ಎಂಬುದು ನಮ್ಮ ತಿಳುವಳಿಕೆಗೆ ಬರುತ್ತದೆ. 'ಚಿದಂಬರ ರಹಸ್ಯ'ದಲ್ಲಿ ಕೆಸರೂರಿನ ಅವನತಿಗೆ ಕಾರಣವಾದ ಅಂಶಗಳು, 'ನಿಗೂಢ ಮನುಷ್ಯರು' ಕೃತಿಯಲ್ಲಿ ಅರ್ಥವಾಗದ ವ್ಯಕ್ತಿತ್ವ ಹಾಗೂ ಅರ್ಥವಾಗದ ಪರಿಸರದ ನಿಗೂಢತೆಗೆ ಕಾರಣಗಳು, 'ಕರ್ವಾಲೊ' ಕಾದಂಬರಿಯಲ್ಲಿ ಹಾರುವ ಓತಿಯನ್ನು ಹುಡುಕುವುದಕ್ಕೆ ನಿರ್ಮಾಣವಾಗುವ ಪರಿಸರ ಹೀಗೆ ಕೃತಿಗಳಲ್ಲಿ ಒಂದು ಸಂದರ್ಭ ಮತ್ತೊಂದು ಸಂದರ್ಭದ ಜೊತೆ ಸೇರಿ ನಿರ್ಮಾಣವಾಗುವ ಸಂದರ್ಭಗಳು ಬಿಡಿಸಲಾಗದವುಗಳಾಗಿ ಕಂಡು ಬರುತ್ತವೆ ಎಂಬುದನ್ನು ಸಸ್ಯೂರ್ ಗುರ್ತಿಸುತ್ತನೆ.

- ತಮ್ಮ ಭಾಷೆಯಲ್ಲಿನ ಇಂಥ ಎಲ್ಲ ವ್ಯತ್ಯಾಸಗಳೂ ಮುಖ್ಯವಲ್ಲ. ಕಾರು ಕಲ್ಲು ಕೊಲ್ಲು ಎಂಬಲ್ಲಿನ 'ಕ' ಕಾರದ ಉಚ್ಚಾರಣೆಯ ವ್ಯತ್ಯಾಸ ಅಷ್ಟು ಮುಖ್ಯವಲ್ಲ. ಆದರೆ ಧನ ಮತ್ತು ದನಗಳಲ್ಲಿ 'ದ' ಕಾರದ ವ್ಯತ್ಯಾಸ, ಅರ್ಥ ವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಅಂಥ ಅರ್ಥ ವ್ಯತ್ಯಾಕ್ಕೆ ಕಾರಣವಾಗುವಂಥ ವ್ಯತ್ಯಾಸಗಳನ್ನು ಫೊನೀಂ ಅಥವ ಧ್ವನಿಮಾ ಎನ್ನುತ್ತಾರೆ.

- ಧ್ವನಿ ವ್ಯತ್ಯಾಸಗಳಿಂದಲೇ ಅರ್ಥ ಹುಟ್ಟುತ್ತದೆ. ಈವ್ಯತ್ಯಾಸಗಳು ಯಾದೃಚ್ಛಿಕವೂ ಹೌದು, ವ್ಯವಸ್ಥಿತವೂ ಹೌದು.

- ಸಂರಚನಾವಾದಿ ಸಾಹಿತ್ಯ ವಿಮರ್ಶಕರು ಪಠ್ಯದ ವಿಶ್ಲೇಷಣೆಯಲ್ಲಿ ಅನೇಕ ವಿಧವಾದ ಭಾಷಾ ಶಾಸ್ತ್ರಿಯ ಪರಿಕಲ್ಪನೆಯನ್ನು ಬಳಸಿಕೊಳ್ಳುತ್ತಾರೆ. ಶಬ್ದ ಮತ್ತು ಪದ ವಿನ್ಯಾಸಗಳ ವೈರುಧ್ಯ, ಅನುಕ್ರಮಾತ್ಮಕ ಮತ್ತು ಸಾಹಚರ್ಯಾತ್ಮಕ ಸಂಬಂಧಗಳ ವೈರುಧ್ಯ ಇಡೀ ಪಠ್ಯವನ್ನು ಒಂದು ಯುಕ್ತವಾದ ವಾಕ್ಯವೆಂದು ಗುರುತಿಸುತ್ತಾರೆ.

- ಸಸ್ಯೂರ್ ಸಮಾಜ ಶಾಸ್ತ್ರಿಯ ಹಿನ್ನಲೆಯಲ್ಲಿ ಸಮಾಜವು ಒಂದು ರಚನೆಯ ವ್ಯವಸ್ಥೆ ಎಂದು ಕರೆಯುತ್ತಾನೆ. ಏಕೆಂದರೆ ಒಂದು ಸಮಾಜದಲ್ಲಿರುವ ಹಲವು ಜಾತಿ, ವರ್ಣ, ವರ್ಗಗಳು ತನ್ನದೆ ಆದ ವರ್ತನೆ ಹಾಗೂ ಆಲೋಚನೆಯ ಪರಂಪರೆಯನ್ನು ಒಳಗೊಂಡು ಒಂದರ ಜೊತೆಗೆ ಮತ್ತೊಂದು ಭದ್ರವಾಗಿ ಇರುತ್ತದೆ.

- ಈ ತಾತ್ವಿಕತೆಯ ಮೂಲಕ ಜೀವನ ನೋಡುವ ಕ್ರಮದಲ್ಲಿ ಎಷ್ಟು ಪ್ರಭಾವ ಬೀರಿದೆಯೆಂದರೆ ಸಾಂಸ್ಕೃತಿಕವಾಗಿಯೂ ಇದರ ಪ್ರೇರಣೆಯನ್ನು ಗುರ್ತಿಸಬಹುದು. ಕೃತಿಗಳಲ್ಲಿ ಒಂದು ಸಮಾಜದ ರಚನೆಯೊಳಗೆ ಸಾಂಸ್ಕೃತಿಕವಾಗಿ ಒಂದು ಬದುಕಿನ ಕ್ರಮವನ್ನು ಗುರ್ತಿಸಲಾಗುತ್ತಿರುತ್ತದೆ ಅಂದರೆ ಜಾತಿ,ವರ್ಗಕ್ಕೆ ಸಂಬಂಧಿಸಿದಂತೆ ಅವರವರ ಆಲೋಚನೆ, ಗ್ರಹಿಕೆಗಳನ್ನು ಕೃತಿ ಸಂರಚಿಸುತ್ತದೆ 'ನಿಗೂಢ ಮನುಷ್ಯರು' ಕೃತಿಯಲ್ಲಿ ಕುಳುಪ ಹಾಗೂ ಮರಸರನ ಬದುಕನ್ನು ಅರ್ಥೈಸಿಕೊಂಡಾಗ ಈ ವಿಚಾರ ಅರ್ಥವಾಗುತ್ತದೆ. ಈ ಕೃತಿಯಲ್ಲಿ ಬರುವ ಗೋಪಾಲಯ್ಯ ಹಾಗೂ ಕಾಂಪ್ರನ ಬದುಕಿನ ಕ್ರಮದಲ್ಲಿ ಸತ್ತವರನ್ನು ಮಣ್ಣು ಮಾಡುವುದು ಇವರ ಆಚಾರ ಹಾಗೂ ನಂಬಿಕೆಯಾಗಿರುತ್ತದೆ. ಆದರೆ ಈ ವಾಸ್ತವ ಪ್ರಪಂಚದಲ್ಲಿಯೇ ಇರುವ ಮರಸರನ ಹಾಗೂ ಕುಳಪನ ಆಚಾರ ಹಾಗೂ ನಂಬಿಕೆಗಳು ಇವರಿಗಿಂತ ಬೇರೆ ರೀತಿಯಾಗಿರುತ್ತದೆ. ಇವರ ಸಾಂಸ್ಕೃತಿಕ ಲೋಕದಲ್ಲಿ ಸತ್ತ ಸಣ್ಣ ಮಗುವನ್ನು ಮಣ್ಣು ಮಾಡದೆ ಶವವನ್ನು ಸುಡದೆ ಕಾಂಪ್ರನ ಮನೆಯ ಹಿತ್ತಲ ಕಡೆ ಕಾಂಪ್ರನ ಅಜ್ಜಿಯನ್ನು ಮಣ್ಣು ಮಾಡಿರುವುದನ್ನು ನೋಡಿರುವ ಮರಸರ ಅದೇ ಸುಡುಗಾಡು ಎಂದು ಭಾವಿಸಿ ತನ್ನ ಮಗನನ್ನು ಎಸೆದು ಹೋಗಿರುತ್ತಾನೆ. ಇದನ್ನು ಕಂಡ ಕಾಂಪ್ರ ಕೋಪಗೊಂಡು ಗೋಪಾಲಯ್ಯನಿಗೆ ದೂರು ನೀಡಿ ಕರೆತರುತ್ತಾನೆ. "ನೋಡಿ, ಅಲ್ಲಿ ಆ ಮರದ ಪಕ್ಕದಲ್ಲಿ ಆ ಮಗೀನ ಹೆಣ ಎಸೆದಿದ್ದಾನೆ." ಏಕೆಂದರೆ ಕುಳಪ ಮರಸರ ನ ಸಾಂಸ್ಕೃತಿಕ ಲೋಕದಲ್ಲಿ ಸಣ್ಣ ಮಕ್ಕಳು ಸತ್ತರೆ ಮಣ್ಣು ಮಾಡುವುದಿಲ್ಲವೆಂದು ಒಂದು ವೇಳೆ ಮಣ್ಣು ಮಾಡಿದರೆ ಮತ್ತೆ ಆ ಮಕ್ಕಳು ಹುಟ್ಟುವುದಿಲ್ಲವೆಂದು ಹೇಳುತ್ತಾನೆ. ಹೀಗೆ ಅವರವರ ಸಾಂಸ್ಕೃತಿಕ ಜಗತ್ತಿನಲ್ಲಿ ಇರುವ ನಂಬಿಕೆ ಆಚರಣೆಗಳನ್ನು ಬಿಟ್ಟು ಅವರು ಬದುಕುವುದು ಸಾಧ್ಯವಿಲ್ಲ. ಏಕೆಂದರೆ ಅವರ ನಂಬಿಕೆಗಳು ಅವರನ್ನು ರೂಪಿಸುತ್ತಿದೆಯೋ ಅಥವ ಇವರೆ ಆ ನಂಬಿಕೆಗಳನ್ನು ಬಿಟ್ಟು ಬದುಕುವುದಕ್ಕೆ ಸಾಧ್ಯವಿಲ್ಲವೋ ಎಂದು ಹುಡುಕ ಹೋದಾಗ ತಿಳಿಯುವ ಅಂಶ ಆಯಾ ವರ್ಗದ ಜನರನ್ನು ರೂಪಿಸುವುದು ಅವರ ಪಾರಂಪರಿಕ ಲೋಕವೇ ಅವರ ಬದುಕನ್ನು ರೂಪಿಸಿದ ಪರಂಪರೆಯೇ ಒಂದು ಸಂರಚನೆಯಾಗಿರುತ್ತದೆ. ಎಂಬುದನ್ನು ಗ್ರಹಿಸಬಹುದಾಗಿರುತ್ತದೆ.

- ಈ ಸಂರಚನೆ ವಿಮರ್ಶಾ ಮಾರ್ಗದಿಂದ ಕನ್ನಡದ ಸಾಹಿತ್ಯದಲ್ಲಿ ಮೊದಲು ಬಂದ ವಿಮರ್ಶಾ ಲೇಖನಗಳಲ್ಲಿ ಸಾಮಾನ್ಯವಾಗಿ ದ್ವಂದ್ವ ವಿನ್ಯಾಸದಿಂದ ಕೂಡಿದ ರಚನೆಯನ್ನು ನೋಡಬಹುದು. ಅಂದರೆ ಹಿಂಸೆ –ಅಹಿಂಸೆ, ಕಪ್ಪು– ಬಿಳುಪು, ಮೇಲುವರ್ಗ – ಕೆಳವರ್ಗ ಹೀಗೆ ಎರಡನ್ನು

ಒಟ್ಟೊಟ್ಟಿಗೆ ಇಟ್ಟು ನೋಡಲಾಯಿತು, ಇದು ಒಂದು ಇನ್ನೊಂದರ ಜೊತೆ ಸಂಬಂಧವನ್ನು ಇಟ್ಟುಕೊಂಡ ರಚನೆಯನ್ನು ಒಳಗೊಂಡಿರುತ್ತದೆ.

- ಇದೇ ರೀತಿಯಲ್ಲಿ ಭಾಷಾಶಾಸ್ತ್ರದಲ್ಲಿಯು ಒಂದು ಘಟಕ ಮತ್ತೊಂದು ಘಟಕದ ಜೊತೆ ಅಷ್ಟೇ ಬಿಡಿಸಲಾರದ ಸಂಬಂಧವನ್ನು ಹೊಂದಿದೆ ಎಂಬುದನ್ನು ಗಮನಿಸಬಹುದು. ಒಂದು ಸಣ್ಣ ಉದಾಹರಣೆಯೊಂದಿಗೆ ವಿವರಿಸುವುದಾದರೆ 'ಅದು' ಎಂಬ ಪದವನ್ನು ಬಿಡಿಸಿದರೆ ಅ+ದ್+ಉ ಎಂದಾಗುತ್ತದೆ. ಇಲ್ಲಿ ಒಂದು ವ್ಯಂಜನ ಎರಡು ಸ್ವರಗಳು ಸೇರಿ ಒಂದು ಪದವಾಗಿದೆ ಇಲ್ಲಿ ಬಿಡಿಸಲಾಗಿರುವ ಘಟಕಗಳು ಒಂದು ಮತ್ತೊಂದರ ಜೊತೆ ಸೇರಿ ರಚನೆಯಾಗಿದೆ ಆದರೆ ಇದು ಎಷ್ಟು ಗಟ್ಟಿ ಸಂರಚನೆ ಎಂದರೆ ಒಂದನ್ನೊಂದು ಒಡೆಯಲು ಸಾಧ್ಯವಿಲ್ಲ ಅಷ್ಟರ ಮಟ್ಟಿಗೆ ಇದು ಭದ್ರವಾದ ರಚನೆಯಾಗಿರುತ್ತದೆ.

ಹೀಗೆ ಕಾದಂಬರಿಕಾರ ತಾನು ಬದುಕುವ ಸಮಾಜದ ಮೂಲಕ ಆಯ್ಕೆ ಮಾಡಿಕೊಳ್ಳುವ ವಸ್ತು ಹಾಗೂ ಅದಕ್ಕೆ ಸಂಬಂಧಿಸಿದ ಪದ ರಚನೆಯನ್ನು ಅಲ್ಲಿನ ಜನರು ಮಾತನಾಡುವ ಪ್ರಸ್ತುತ ರೀತಿಯಲ್ಲಿಯೇ ನಿರೂಪಿಸುತ್ತಾನೆ. ಹೀಗೆ ರಚನೆಯಾದ ಕೃತಿಯನ್ನು ಓದುಗ ಓದುವುದಕ್ಕೆ ಪ್ರಯತ್ನಿಸಿದಾಗ ಕೃತಿಯಾರ್ಥ ಓದುಗನಿಗೆ ಲಭಿಸುತ್ತದೆ. ಹೇಗೆಂದರೆ ಕೃತಿಕಾರ ಆಯ್ಕೆ ಮಾಡಿಕೊಂಡ ಭಾಷೆ ಪ್ರಸ್ತುತದ್ದು. ಈ ಪ್ರಸ್ತುತ ಭಾಷೆಯೇ ಒದುಗನಿಗೆ ಅರ್ಥದ ಪ್ರಚೋದನೆಯನ್ನು ನೀಡುತ್ತದೆ. ಹೀಗೆ ಸಸ್ಯೂರ್ ತನ್ನ ಸಿದ್ಧಾಂತವನ್ನು ಪ್ರತಿಪಾದಿಸುತ್ತಾನೆ.

ಅಡಿಟಿಪ್ಪಣಿ

1. ಡೆರೀಡಾ, ಡಾ. ಮಾಧವ ಪೆರಾಜೆ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 2003 ಪು 18,19
2. ಕಾದಂಬರಿಯ ಮೀಮಾಂಸೆ, ಡಾ. ಸುರೇಶ್ ಪಾಟೀಲ್ 2011 ಪುಟ 68 ಮತ್ತು 70
3. ಡಾ. ಎಚ್. ಶಶಿಕಲಾ ರವರು ಎಂ. ಫಿಲ್ ತರಗತಿಯಲ್ಲಿ ವಿಮರ್ಶೆಯ ಮಾದರಿಗಳನ್ನು ಪರಿಚಯಿಸುತ್ತಾ ಉಪನ್ಯಾಸ ಮಾಡುವ ಸಂದರ್ಭದಲ್ಲಿ ಮಾಡಿಕೊಂಡ ಟಿಪ್ಪಣಿಗಳು

## ಅಧ್ಯಾಯ – 3

## ಡೆರೀಡಾ ರೂಪಿಸಿದ ನಿರಚನಾವಾದ ಸಿದ್ಧಾಂತದಲ್ಲಿ ಮೂಡಿಬಂದ ಚಿಂತನೆಗಳು

ಸಾಂಪ್ರದಾಯಿಕವಾಗಿ ಒಂದು ಕೃತಿ ರಚನೆಯಾಗುವ ಸಂದರ್ಭದಲ್ಲಿ ರಚನಾಕಾರ ಕೃತಿಯಲ್ಲಿ ಒಂದು ಅರ್ಥವನ್ನು ಹುದುಗಿಸಿ ಅದಕ್ಕೆ ಅದರದ್ದೇ ಆದ ಗಡಿ ರೇಖೆಗಳನ್ನು ನೀಡುತ್ತಾನೆ. ಎನ್ನುವ ನಂಬಿಕೆಯನ್ನು ಬುಡ ಮೇಲು ಮಾಡುವುದೇ ವಿರಚನೆ ಸಿದ್ಧಾಂತದ ಗ್ರಹಿಕೆಯಾಗಿದೆ.

ಒಂದು ಕೃತಿ ರಚನೆಯ ಸಂದರ್ಭದಲ್ಲಿ ಕೃತಿಯೊಳಗೇ ಇದ್ದು ಪರಸ್ಪರ ಘರ್ಷಿಸುವ ಶಕ್ತಿಗಳು ಅರ್ಥ ಮತ್ತು ಬಂಧದ ತೋರಿಕೆಯನ್ನು ಕರಗಿಸುತ್ತವೆ. ಹಾಗೂ ಕೃತಿಯಲ್ಲಿ ಮೂಡುವ ಸಂದರ್ಭಗಳು ಒಂದು ಮತ್ತೊಂದರ ಜೊತೆಗೂಡಿ ನಾವು ನಂಬಿರುವ ಕೃತಿಯ ಅರ್ಥವನ್ನು ಮತ್ತೊಂದರ ಕಡೆಗೆ ಚಲಿಸುವಾಗೆ ಮೂಡಿಸುತ್ತದೆ. ಆದ್ದರಿಂದ ಕೃತಿಯ ಅರ್ಥವನ್ನು ನಿರ್ಧರಿಸಲು ಆಗದ ಅನೇಕ ಅರ್ಥ ಸಾಧ್ಯತೆಗಳನ್ನು ತೋರುವ ಬಗೆಯನ್ನು ಗುರ್ತಿಸುವುದೇ ವಿರಚನೆಯಾಗಿರುತ್ತದೆ.

ಡೆರೀಡಾನ ಚಿಂತನೆಗಳನ್ನು ವಿಸ್ತರಿಸಲು ಅವನು ಬಳಸಿಕೊಂಡ ಚಿಂತನೆಗಳ ಹಿನ್ನಲೆಯೆಂದರೆ ಸಸ್ಯೂರನದ್ದು. ಈತನ ಚಿಂತನೆಗಳನ್ನು ಬಳಸಿಕೊಂಡ ಡೆರೀಡಾ ಹೊಸ ವಿಮರ್ಶಾ ಮಾರ್ಗವನ್ನು ಕಟ್ಟಿಕೊಡುತ್ತಾನೆ. ಈತನ ಪ್ರಕಾರ "ಕೃತಿಯಾಚೆಗೆ ಏನು ಇಲ್ಲ" ಆದ್ದರಿಂದ ಕೃತಿಯನ್ನು ನಿಕಟ ಓದಿಗೆ ಒಳಪಡಿಸಿ ಅದರಲ್ಲಿರುವ ಅಂಶಗಳ ಸಂಬಂಧವನ್ನು ಬಿಡಿಸಿ ಬಿಡಿಸಿ ನೋಡುವುದರ ಮೂಲಕ ಕೃತಿ ಹೊಮ್ಮಿಸುವ ಖಚಿತ ಅರ್ಥದ ಭ್ರಮೆಯನ್ನು ಮೂಡಿಸುವ ಸಂಯೋಜನೆ ಮಾತ್ರ. ಈ ಸಂಯೋಜನೆಯನ್ನು ಮೀರುವ, ವಿರೋಧಿಸುವ ಅಂಶಗಳು ಪಠ್ಯದೊಳಗೆ ಅಡಗಿರುತ್ತವೆ ಎಂಬುದನ್ನು ಅರಿಯಬೇಕಾಗುತ್ತದೆ. ಹಾಗೂ ಮಂಡಿಸಬೇಕಾಗುತ್ತದೆ. ಏಕೆಂದರೆ ಕೃತಿಯಲ್ಲಿ ಮೂಡಿಸಲಾದ ಧ್ವನಿಯ ಅರ್ಥ ಸಾಧ್ಯತೆಗಳಲ್ಲಿ ಒಂದನ್ನು ಮಾತ್ರ ಮನ್ನಿಸಿ ಇನ್ನಿತರ ಅರ್ಥಗಳನ್ನು ನಿರಾಕರಿಸುತ್ತದೆ. ಅಥವ ದಮನಗೊಳಿಸಲಾಗುತ್ತದೆ. ಆದರೆ ಮನ್ನಣೆಯನ್ನು ಪಡೆಯುವ ಅರ್ಥ ನಿರಾಕರಿಸಲಾದ ಅರ್ಥವನ್ನೇ ಆಧಾರ ಮಾಡಿಕೊಂಡಿರುತ್ತದೆ. ಮತ್ತು ಈ ಅರ್ಥವೂ ನಾವು ತಿಳಿದಷ್ಟು ಖಚಿತವಾದುದಲ್ಲ. ಎಂದು ವಿರಚನೆ ಸಿದ್ಧಾಂತ ತಿಳಿಸುತ್ತದೆ.

ಖಚಿತ ಅರ್ಥಕ್ಕೆ ಪ್ರತಿಯಾಗಿ ಡೆರೀಡಾ ಭಾಷಿಕ ಅರ್ಥಗಳ ಖಚಿತವಲ್ಲದ ಲೀಲೆಯನ್ನು ಪ್ರತಿಪಾದಿಸುತ್ತಾನೆ. ಈ ಪ್ರತಿಪಾದನೆಗೆ ಮತ್ತೇ ಡೆರೀಡಾ ಸಸ್ಯೂರನ ಚಿಂತನೆಯನ್ನು

ಬಳಸಿಕೊಳ್ಳುತ್ತಾನೆ. ಭಾಷೆಯಲ್ಲಿ ಸೂಚಕಗಳು ವಸ್ತು ಅಂಶವಾಗಿರುತ್ತದೆ. ಇವು ಮಾತಿನ ರೂಪದಲ್ಲಿ ಅಥವಾ ಬರವಣಿಗೆಯ ರೂಪದಲ್ಲಿರಬಹುದು. ಇದು ಏನನ್ನು ಸೂಚಿಸುತ್ತವೆಯೇ ಅದೆಲ್ಲವೂ ಸೂಚಕಗಳು ಅಂದರೆ ಕೇಳಿಸಿಕೊಂಡ ಶ್ರವಣ ಬಿಂಬದ ಮೂಲಕ ಅರ್ಥೈಸಿಕೊಂಡು ಹೊರಡುವ ಅರ್ಥ ಮತ್ತು ವಿಚಾರಗಳೆಲ್ಲ ಸೂಚಿತಗಳು. ಆದರೆ ಅರ್ಥವೆನ್ನುವುದು ಸೂಚಕಗಳಲ್ಲೆ ಅಂತರ್ಗತವಾಗಿರುವ ಲಕ್ಷಣವಲ್ಲ. ಸಸ್ಯೂರನ ಈ ಚಿಂತನೆಯನ್ನು ಬಳಸಿಕೊಂಡು ಡೆರೀಡಾ ತನ್ನದೆ ಆದ ನಿರ್ಧಾರವನ್ನು ವಿವರಿಸುತ್ತಾನೆ. ಯಾವುದೇ ಉಕ್ತಿ ಅಥವ ಲೇಖಕನ ಸಂದರ್ಭದಲ್ಲಿ ಸೂಚಕಗಳ ಅರ್ಥ ಸಂಪೂರ್ಣವಾಗಿ ಅಸ್ತಿತ್ವದಲ್ಲಿ 'ಇರುವುದಿಲ್ಲ' ಅಥವ ಅರ್ಥದ ಸುಳಿವುಗಳು ಸಂಪೂರ್ಣವಾಗಿ ಇಲ್ಲವಾಗಿರುವುದೂ ಇಲ್ಲ. ಏಕೆಂದರೆ ಅರ್ಥ ಸೂಚನೆ ಎಂಬುದು ಕೇವಲ ಅರ್ಥ ವ್ಯತ್ಯಾಸಗಳ ಜಾಲವಷ್ಟೆ. ಇದನ್ನು ಡೆರೀಡಾ ಮುಖ ಮರೆಸಿಕೊಳ್ಳುವ ಎಂಬ ವಿಶೇಷಣದ ಮೂಲಕ ಗುರ್ತಿಸುತ್ತಾನೆ. ಇದರ ಅರ್ಥವಿಷ್ಟೇ ಅರ್ಥದ ಸುಳಿವುಗಳು ವಕ್ತೃವಿಗೂ ಶ್ರೋತೃವಿಗೂ ಪತ್ತೆಯಾಗುವುದು ಕಷ್ಟ.

ಒಂದು ಸಂದರ್ಭದಲ್ಲಿ ಬಳಕೆಯಾಗುವ ಪದಗಳು ಮತ್ತೊಂದು ಅಸಂಖ್ಯಾತ ಸಂದರ್ಭದಲ್ಲಿ ಅದೇ ಪದಗಳು ಬಳಕೆಯಾದರೂ ಅಥವ ಆಗುವಂಥವು ಆದರೆ ಬಳಸಿದ ಭಿನ್ನ ಸಂದಭದಲ್ಲಿ ಬಳಕೆಯಾದಾಗ ಉಂಟಾಗಿದ್ದ, ಉಂಟಾಗುವ 'ಅರ್ಥ'ಗಳು ಈ ಸಂದರ್ಭದ ಅರ್ಥಕ್ಕಿಂತ ಬೇರೆಯಾಗುತ್ತದೆ ಅಥವ ಅರ್ಥ ನುಸುಳಿ ಹೋಗುವ ಸುಳಿವು ಸಿಗುತ್ತದೆ ಅಂದರೆ ಅರ್ಥ ಒಂದು ಸಂದರ್ಭದ ಅರ್ಥಕ್ಕಿಂತ ಬೇರೆಯೇ ಆಗಿರುತ್ತದೆ ಆ ಭಿನ್ನ ಅರ್ಥಗಳು ವಾಸ್ತವದಲ್ಲಿ ಇಲ್ಲದ ಅರ್ಥವಾಗಿರುತ್ತವೆ. ಆದರೆ ಸಂದರ್ಭದ ವಿಶಿಷ್ಟತೆಯಿಂದ ನುಸುಳಿ ಹೋಗುವ ಅರ್ಥಗಳು ಸಂದರ್ಭದ ಉಕ್ತಿ ಖಚಿತ ಅರ್ಥವನ್ನು ತನ್ನಲ್ಲಿ ಹೊಂದಿದೆ ಎಂಬಂತೆ ಭಾಸವಾಗುತ್ತದೆ. ಇಲ್ಲಿ ಡೆರೀಡಾ ವಾದಿಸುವ ಅಂಶವೆಂದರೆ ಮಾತಿನಲ್ಲಿ ಅಥವ ಬರವಣಿಗೆಯಲ್ಲಿ ಆ ಕ್ಷಣದ ಖಚಿತವಾದ, ತೀರ್ಮಾನಿಸಬಹುದಾದ ಅರ್ಥವಿರುವುದಿಲ್ಲ. ಹಾಗೂ ಭಾಷೆಯ ವ್ಯತ್ಯಾಸಗಳ ಲೀಲೆ ಖಚಿತ ಅರ್ಥದ ಪರಿಣಾಮ ತಿರ್ಮಾನಿಸಬಹುದಾದ ಅರ್ಥದ ಪರಿಣಾಮಗಳನ್ನು ಮೂಡಿಸುತ್ತದೆ. ಆದರೆ ಈ ಪರಿಣಾಮ ನಿಜವಲ್ಲ. ಕೇವಲ ಭ್ರಮೆ ಎಂದು ಹೇಳುತ್ತಾನೆ.

ಭಾಷೆಯಲ್ಲಿ ಮೂಡುವ ವ್ಯತ್ಯಾಸಗಳಿಂದ ಪಠ್ಯವು ತನ್ನ ಅರ್ಥದಲ್ಲಿ ಭಿನ್ನ ಪರಿಣಾಮವನ್ನು ಉಂಟು ಮಾಡುತ್ತಿರುತ್ತವೆ. ಹಾಗೆಯೇ ಈ ಭಿನ್ನ ಅರ್ಥಕ್ಕೆ ವಾಸ್ತವದಲ್ಲಿ ನಿಜವಾದ ಇರುವಿಕೆ ಇರುವುದೆ ಇಲ್ಲ. ಏಕೆಂದರೆ ಒಂದಾದ ನಂತರ ಒಂದು ಇನ್ನೊಂದು ಭಾಷಿಕ ವ್ಯಾಖ್ಯಾನಗಳನ್ನು ಮಾಡುತ್ತಾ ಪಠ್ಯದ ನಿಜವಾದ ಅರ್ಥ ನೆಲೆ ನಿಲ್ಲುವುದನ್ನು ಮುಂದೂಡುತ್ತಲೇ ಇರುತ್ತದೆ ಖಚಿತ ಅರ್ಥವನ್ನು

ನಿರ್ಧರಿಸ ಬಹುದಾದ ಸಾಧ್ಯತೆ ಇರುವಂತೆಯೇ ಅದರ ಅರ್ಥ ನಿರ್ಧಾರವನ್ನು ಮುಂದೂಡುವ ಅವಕಾಶಗಳು ನಿರ್ಧಾರವಾಗುತ್ತಿರುತ್ತವೆ. ಆದ್ದರಿಂದ ಮಾತಿಗೇ ಆಗಲಿ ಬರವಣಿಗೆಗೇ ಆಗಲಿ ಖಚಿತ ಅರ್ಥವನ್ನು ನಿರ್ಧರಿಸಲು ನೆಲೆಯೆಂಬುದೇ ಇಲ್ಲ.

ಸಸ್ಸೂರನು ಹೇಳಿದ ಸಮಾಜ ಶಾಸ್ತ್ರೀಯ ಹಿನ್ನಲೆಯನ್ನು ಹಿಡಿದು ಡೆರೀಡಾ ಮುಂದುವರೆಯುತ್ತಾನೆ. ಹಾಗೂ ತನ್ನದೇ ಆದ ನಿರ್ಧಾರವನ್ನು ವಿವರಿಸುತ್ತಾನೆ. ಸಸ್ಯೂರ್ ವಿವರಿಸಿದಂತೆ ಸಮಾಜದಲ್ಲಿ ಹಲವು ಜಾತಿ ವರ್ಗ ಧರ್ಮ ಇವುಗಳಲ್ಲಿ ಸೇರಿ ಒಂದು ಗಟ್ಟಿ ರಚನೆಯಾಗಿರುತ್ತದೆ. ಅಂದರೆ ಒಂದು ಮತ್ತೊಂದರ ಜೊತೆಗೂಡಿ ಬಿಡಿಸಲಾರದ ನಂಟು ಹೊಂದಿರುತ್ತದೆ. ಇದನ್ನು ಸಸ್ಯೂರ್ ವೈರುಧ್ಯಗಳ ಹಿನ್ನಲೆಯನ್ನು ಹಿಡಿದು ಮಾತನಾಡುತ್ತಾನೆ. ಸಮಾಜದ ರಚನೆಯಲ್ಲಿ ಈ ಜೋಡಿಗಳು ಇರಲೇ ಬೇಕು ಅಂದರೆ ಮೇಲುವರ್ಗ–ಕೆಳವರ್ಗ, ಯುದ್ಧ – ಶಾಂತಿ, ಸತ್ಯ– ಸುಳ್ಳು, ಗಂಡು– ಹೆಣ್ಣು ಇಲ್ಲಿ ಮೊದಲನೆಯದು ಶ್ರೇಷ್ಠವಾದದ್ದು, ಎರಡನೆಯದು ಮೊದಲನೆಯದಕ್ಕಿಂತ ಕಡಿಮೆ ದರ್ಜೆಯನ್ನು ಹೊಂದಿರುವುದೆಂದು ತಿಳಿಯಲಾಗಿದೆ. ಮೊದಲನೆಯದ್ದು ತನ್ನ ಸ್ಥಾನಗಳನ್ನು ಉಳಿಸಿಕೊಳ್ಳವುದಕ್ಕೆ ಅನೇಕ ತಂತ್ರಗಳನ್ನು ಹೂಡುತ್ತಿರುತ್ತದೆ. ಎಂದು ವಿವರಿಸಿದ ಸಸ್ಯೂರ್‌ನ ಈ ಶ್ರೇಣಿಕರಣವನ್ನು ಡೆರೀಡಾ ನಿರಚಿಸುತ್ತಾನೆ. ಈ ಜೋಡಿ ಕಲ್ಪನೆಗಳಲ್ಲಿ ಮೊದಲನೆಯದೇ ಎರಡನೆಯದ್ದರಿಂದ ಹುಟ್ಟಿದ್ದು ಅಥವ ಎರಡನೆಯ ಕಲ್ಪನೆ ಮೊದಲನೆಯದ್ದರ ಒಂದು ವಿಶೇಷತೆಯನ್ನು ಒಳಗೊಂಡಿದೆ ಆದರೆ ಡೆರೀಡ ಹೀಗೆ ಅಂಗೀಕೃತ ಶ್ರೇಣಿಯನ್ನು ಪಲ್ಲಟಗೊಳಿಸಿ ಹೊಸ ಶ್ರೇಣಿಯನ್ನು ಸೂಚಿಸುವಷ್ಟಕ್ಕೇ ನಿಲುವುದಿಲ್ಲ. ಈ ಹೊಸ ಶ್ರೇಣಿಯೂ ಅಸ್ಥಿರವಾದದ್ದೆಂದು ತೋರಿಸಿ ಖಚಿತ ಅರ್ಥದ ಅನಿಶ್ಚಿತತೆಯನ್ನು ಮನಗಾಣಿಸುತ್ತಾನೆ. ಏಕೆಂದರೆ ಸಮಾಜ ನಿರಂತರ ಚಲನಶೀಲವಾದದ್ದು ಸಮಾಜದಲ್ಲಿ ಬದಲಾವಣೆಗಳು ಕಾಣಿಸಿಕೊಂಡರೆ ಅಲ್ಲಿ ವ್ಯಕ್ತಿಯ ಆಲೋಚನೆಗಳು ನಿರಂತರ ಬದಲಾವಣೆಗಳಿಗೆ ಒಳಗಾಗುತ್ತಲೇ ಇರುತ್ತದೆ ಎಂದರ್ಥ. ಈ ಬದಲಾವಣೆಗಳನ್ನು ಹಿಡಿಯಲು ಹೋದಾಗ ಈ ಶ್ರೇಣೀಕರಣವನ್ನು ಒಪ್ಪಿಕೊಂಡರೂ ಮೊದಲನೆಯದ್ದು ಎಂದು ನಾವು ಏನನ್ನು ತಿಳಿದಿರುತ್ತೇವೆಯೇ ಅದು ನಿರಂತರ ಘರ್ಷಣೆಯಿಂದ  ಮತ್ತೊಂದರ ಕಡೆಗೆ ಚಲಿಸುತ್ತದೆ. ಅಂದರೆ ತನ್ನ ಸ್ಥಾನವನ್ನು ಪಲ್ಲಟಿಸುತ್ತದೆ. ಎರಡನೆಯ ದರ್ಜೆ ಮೊದಲನೆಯದರ ಕಡೆಗೆ ಚಲಿಸುತ್ತದೆ. ಹಾಗೆ ಮೊದಲನೆಯದ್ದು ತನ್ನ ಸ್ಥಾನವನ್ನು ಪಲ್ಲಟಿಸುತ್ತದೆ. ಹೀಗೆ ಕೃತಿಯಲ್ಲಿ ಸಂದರ್ಭಗಳು ಒಂದೊಂದಕ್ಕೂ ಘರ್ಷಣೆ ಉಂಟಾಗುವುದರ ಮೂಲಕ ಕೃತಿಯಲ್ಲಿ ಒಂದು ಅರ್ಥ ಎಂಬುದು ಇರುವುದಿಲ್ಲ. ಹಲವು ಧ್ವನಿಗಳ ಒಗ್ಗೂಡುವಿಕೆಯಿಂದ ಅರ್ಥದ ವಿಸ್ತರಣೆ ಒಂದರಿಂದ ಮತ್ತೊಂದರ ಕಡೆಗೆ ಚಲಿಸುವಿಕೆಯನ್ನು ಗಮನಿಸಬಹುದು. ಏಕೆಂದರೆ ಕೃತಿಯಲ್ಲಿಯು ವಿರೋಧ ಧ್ವನಿಗಳಿದ್ದು

ಕೃತಿ ರಚನೆಗೆ ಬಳಸಿಕೊಂಡ ಭಾಷೆ ರೂಪಕಾತ್ಮಕವಾಗಿರುತ್ತದೆ. ಡೆರೀಡಾ ರೂಪಕಗಳನ್ನು ವಾಚ್ಯಾರ್ಥಕ್ಕೆ ಕುಗ್ಗಿಸಲು ಸಾಧ್ಯವಿಲ್ಲ, ಎಂದು ವಿವರಿಸಿದ ಹಾಗೂ ವಾಚ್ಯಾರ್ಥವೆನ್ನುವುದೂ ಒಂದು ಬಗೆಯ ರೂಪಕವೇ ಆಗಿರುತ್ತದೆ ಆದರೆ ಅವುಗಳ ರೂಪಕಾತ್ಮಕ ಬಳಕೆಯನ್ನು ನಾವು ಮರೆತು ಬಿಟ್ಟಿದ್ದೇವೆ ಎಂದು ವಾದಿಸುತ್ತಾನೆ.

ಡೆರೀಡಾ ತನ್ನ ಓದುವಿಕೆಯ ಕ್ರಮವನ್ನು ಇಮ್ಮಡಿ ಓದುವಿಕೆ ಎಂದು ತಿಳಿಸುತ್ತಾನೆ ಮೊದಲನೆಯ ಓದುವಿಕೆ ಖಚಿತಾರ್ಥದ ಪರಿಣಾಮವನ್ನುಂಟು ಮಾಡುವ ಸಾಮರ್ಥ್ಯ ಹೊಂದಿದೆ ಎಂದು ಭಾವಿಸುತ್ತಾನೆ. ಆದರೆ ಈ ಬಗೆಯ ಓದುವಿಕೆ ಕೇವಲ ತಾತ್ಕಾಲಿಕವಾದದ್ದು. ಈ ಮೊದಲ ಬಗೆಯದು ಎರಡನೆಯ ವಿಮರ್ಶಾತ್ಮಕ, ವಿರಚನಾತ್ಮಕ ಓದುವಿಕೆಗೆ ದಾರಿಮಾಡಿಕೊಡುತ್ತದೆ. ತಾತ್ಕಾಲಿಕವಾಗಿ ಒಪ್ಪಿಕೊಂಡ ಅರ್ಥ ಅನಂತವಾದ ಅರ್ಥಸೂಚನೆಗಳನ್ನು ತೋರಿಸಿಕೊಳ್ಳುತ್ತಾ ಒಳಗು ಮಾಡುತ್ತದೆ ಎನ್ನುತ್ತಾನೆ. ಕೃತಿಕಾರನ ಹಿಂಜರಿಕೆಯ ಕ್ಷೀಣವನ್ನು ವಿವರಿಸುತ್ತದೆ, ಕೃತಿಕಾರನ ಮೂರ್ತ ಸ್ವರೂಪ, ಪದದ ಆಯ್ಕೆ, ವಿಚಾರ ಮಂಡನೆಯ ಕ್ರಮ, ಇತ್ಯಾದಿ ಯಾವುದೇ ಸಂಗತಿಯ ಬಗ್ಗೆ ಅನುಮಾನ ಮೂಡಿ ಕೃತಿಕಾರ ಹಿಂಜರಿಯುವ ಕ್ಷೀಣತೆಯನ್ನು ನಿರೂಪಿಸುವ ಕ್ರಮವನ್ನು ಇದು ಸೂಚಿಸುತ್ತದೆ ಹಾಗೂ ಯಾವುದೇ ಕೃತಿಯ ಪರಸ್ಪರ ವಿರುದ್ಧವಾದ ಅರ್ಥಗಳಲ್ಲಿ ಯಾವುದನ್ನು ಖಚಿತವೆಂದು ತಿಳಿಯಬೇಕು ಎಂದು ನಿರ್ಧರಿಸುವುದಕ್ಕೆ ಸಮರ್ಪಕವಾದ ಯಾವ ಆಧಾರವೂ ದೊರೆಯುವುದಿಲ್ಲ, ಎಂದು ತಿಳಿಯುವುದರಿಂದ ಅರ್ಥದ ಇಕ್ಕಟ್ಟು ಉಂಟಾಗುತ್ತದೆ. ಏಕೆಂದರೆ ಪಠ್ಯದ ವಿರಚನೆ ತನ್ನ ವ್ಯಾಖ್ಯಾನ ಪಠ್ಯಕ್ಕೂ ಅನ್ವಯವಾಗುತ್ತದೆ. ಆದ್ದರಿಂದಲೇ ಪಠ್ಯ ಸ್ವತಃ ತನ್ನನ್ನು ತಾನೇ ವಿರಚನೆಗೆ ಒಳಪಡಿಸಿಕೊಳ್ಳತ್ತದೆ ಎನ್ನುತ್ತಾನೆ ಡೆರೀಡಾ. ಅರ್ಥದ ವಿರಚನೆಯೆಂದರೆ ಅರ್ಥದಿಂದ ಬೇರೆಯಾಗುವುದೆಂದಲ್ಲ. ಎಂದು ಹೇಳುತ್ತಾನೆ ಆತ ಭಾಷೆಯ ಮುಖಾಂತರ ನಾವು ಕೃತಿಯ ಅರ್ಥವನ್ನು ಅರ್ಥ ಮಾಡಿಕೊಳ್ಳುತ್ತೇವೆ. ಆದರೆ ಅರ್ಥವಾಗುತ್ತದೆ ಎಂಬಂತೆ 'ತೋರುವ' ಪಠ್ಯಗಳನ್ನು ವ್ಯತ್ಯಸ್ತಗಳ ವ್ಯವಸ್ಥೆಯಲ್ಲಿ ಸ್ಥಾಪಿಸುವ ಮೂಲಕ ತೋರುವ ಅರ್ಥ ದೃಢವಾದುದಲ್ಲ, ಪಠ್ಯಗಳು ಹೇಳುತ್ತವೆ ಎಂದು ನಂಬಲಾಗುವ ಅರ್ಥಗಳನ್ನು ಆ ಪಠ್ಯಗಳೇ ತಮ್ಮೊಳಗಿನಿಂದ ಛಿದ್ರಿಸುತ್ತಿರುತ್ತವೆ ಎಂಬುದನ್ನು ತೋರಿಸುವುದೇ ಡೆರೀಡಾನ ಉದ್ದೇಶವಾಗಿರುತ್ತದೆ. ಡೆರೀಡಾನ ಚಿಂತನೆಗಳನ್ನು ಹಿಡಿದು ಕೃತಿ ಪ್ರವೇಶ ಮಾಡಿದರೆ 'ಸ್ವರೂಪ' ಕೃತಿಗಳ ಸಾಂಸ್ಕೃತಿಕ ಲೋಕದಲ್ಲಿ ಕೃತಿಯಾಚೆಗೆ ಏನು ಇರುವುದಿಲ್ಲ. ಒಳಧ್ವನಿಗಳ ಮೂಲಕ ವಿರಚಿಸುವುದು ಡೆರೀಡಾನ ವಾದವಾಗುತ್ತದೆ. ಅಂದರೆ ಕೃತಿಗಳನ್ನು ಒಳ ಹೊಕ್ಕು ನೋಡಿದಾಗ ಅದರಲ್ಲಿನ ವಿಚಾರಗಳೇ ಕಥಾ ವಸ್ತುವನ್ನು ವಿರಚಿಸಿಕೊಳ್ಳುತ್ತವೆ. ಕೃತಿಯಲ್ಲಿ ಛಿದ್ರಗೊಂಡ ಅನುಭವಗಳನ್ನು ಸೇರಿಸಿ ಎಣೆಯುತ್ತಿರುವ ನಿರೂಪಕನ ಸ್ವತಂತ್ರ ಅಸ್ತಿತ್ವವಿರುವುದು ಅವನು ಪಡೆದ ಅನುಭವಗಳ ಮೂಲಕ ಸಿಗುವ ಜ್ಞಾನದಲ್ಲಿ

ಅಂದರೆ ಸಂಪೂರ್ಣ 'ಆಗುವಿಕೆ'ಯ ಕಡೆಗೆ ಚಲಿಸುವವನಾಗಿರುತ್ತಾನೆ. ಇಲ್ಲಿ "ಮಾರ್ಕ್ಸ್ ಸಿದ್ಧಾಂತವನ್ನು ಒಪ್ಪಿಕೊಂಡು ಸೋಷಿಲಿಸಂ ಗೆ ಅರ್ಪಿಸಿಕೊಂಡವರು ಶೋಷಣೆ ಎಂಬುದು ಒಂದಲ್ಲ ಒಂದು ರೀತಿಯಲ್ಲಿ ಅನಿವಾರ್ಯವೆಂದು ಹೇಳುವುದು."

ಬ್ರಾಹ್ಮಣ ಜಾತಿಯನ್ನು ಒಪ್ಪಿಕೊಳ್ಳದ, ಜಾತಿ ವ್ಯವಸ್ಥೆಯೇ ಬೇಡವೆಂದು ಹೇಳುವ ಕೃತಿಕಾರ ಕೊನೆ ಕೊನೆಗೆ ತನ್ನ ಜಾತಿಯನ್ನು ಆಧಾರವಾಗಿಟ್ಟುಕೊಂಡು ಮಾತನಾಡುವುದನ್ನು ಕೃತಿಯಲ್ಲಿ ನಿರೂಪಿಸುತ್ತದೆ. ಅಂದರೆ ಬ್ರಾಹ್ಮಣ ಜಾತಿಯ ಪ್ರಜ್ಞೆಯನ್ನು ಒಪ್ಪಿಕೊಳ್ಳದ ನಿರೂಪಕ ನಿಧಾನವಾಗಿ ಆ ಜಾತಿಯಿಂದಲೇ ಅಥವ ಅದರ ಸ್ಥಾನದ ಕಡೆಗೆ ಚಲಿಸುವವನಾಗುತ್ತಾನೆ.

ಅಡಿಟಿಪ್ಪಣಿಗಳು

1. ಡೆರೀಡಾ
2. ವಿಮರ್ಶೆಯ ಪರಿಭಾಷೆ ಪ್ರಥಮ ಆವೃತ್ತಿ 1998.
3. ಕೆ.ಪಿ. ಪೂರ್ಣ ಚಂದ್ರ ತೇಜಸ್ವಿರವರ 'ಸ್ವರೂಪ 'ಕಾದಂಬರಿ ,ಪುಸ್ತಕ ಪ್ರಕಾಶನ ಆರನೆಯ ಮುದ್ರಣ 2007
4. ಡಾ. ಎಚ್. ಶಶಿಕಲಾ ರವರು ಎಂ. ಫಿಲ್ ತರಗತಿಯಲ್ಲಿ ವಿಮರ್ಶೆಯ ಮಾದರಿಗಳನ್ನು ಪರಿಚಯಿಸುತ್ತಾ ಉಪನ್ಯಾಸ ಮಾಡುವ ಸಂದರ್ಭದಲ್ಲಿ ಮಾಡಿಕೊಂಡ ಟಿಪ್ಪಣಿಗಳು

## ಅಧ್ಯಾಯ – 4

## ಸ್ವರೂಪ ಕಾದಂಬರಿಯಲ್ಲಿ ಮೂಡಿದ ವಸ್ತು ಮತ್ತು ತಂತ್ರ

ಛಿದ್ರಗೊಂಡ ಅನುಭವಗಳ ಮೂಲಕ ಸಾಗುವ ' ಸ್ವರೂಪ 'ಕೃತಿ ತನ್ನ ನಿರೂಪಣೆಯನ್ನು ನಾಟಕೀಯವಾಗಿ ಸಾಗಿಸುತ್ತದೆ. ಅಂದರೆ ಜನಪದೀಯ ಕಥೆಗಳಲ್ಲಿ ಸಾಗುವ ನಿರೂಪಣೆಯ ಒಂದು ತಂತ್ರವನ್ನು ಬಳಸಲಾಗಿದೆ. ಈ ಕೃತಿಯಲ್ಲಿ ಶ್ರೀನಿವಾಸ ತನ್ನ ಗೆಳೆಯನಾದ ಹೇಮಂತನ ಬಳಿಯಲ್ಲಿ ತನ್ನ ಅನುಭವಗಳನ್ನು ಹೇಳಿಕೊಳ್ಳುತ್ತಾ ಸಾಗುವುದಕ್ಕೆ ಮುಂಚೆ ಒಂದು ಒಪ್ಪಂದ ಮಾಡಿಕೊಳ್ಳುತ್ತಾನೆ ಅದೇಂದರೆ "ಈಗ ನೀನು ಎದುರು ಇದ್ದೀ. ಕಾಗದದ ಮೇಲೆ ಆಕಾರ ಕೊಡುವ ಪಂಚಾಯ್ತಿ ಇಲ್ಲ. ನೀನು ಸುಮ್ಮನೆ ಆಮೇಲೆ ಎಂದು ಹೇಳುತ್ತಿದ್ದರೆ ಸಾಕು."[1] ಹೀಗೆ ಗೆಳೆಯರಿಬ್ಬರ ನಡುವೆ ನಡೆಯುವ ಒಪ್ಪಂದದಲ್ಲಿ ಶ್ರೀನಿವಾಸ ಕಥೆ ಹೇಳುಗನಾಗಿ ಹೇಮಂತ ಕೇಳುಗನಾಗಿ ಇದ್ದಾರೆ. ಕಥೆ ಕೇಳುವ ಸಂದರ್ಭದಲ್ಲಿ ಹೇಮಂತನ ಪಾತ್ರ ಅಷ್ಟಕಷ್ಟೇ. ಏಕೆಂದರೆ ಹೇಳುಗನ ಮಾತಿಗೆ ಆಮೇಲೆ ಎನ್ನಬೇಕೇ ಹೊರೆತು ಮರು ಮಾತನಾಡಬಾರದು. ಆದ್ದರಿಂದಲೇ ನಿರೂಪಣೆ ನಾಟಕೀಯವಾಗಿ ಸಾಗುತ್ತದೆ. ಈ ನಾಟಕೀಯ ನಿರೂಪಣೆಯಲ್ಲಿ ನಿರೂಪಕ ತೋಡಿಕೊಳ್ಳುವ ತನ್ನ ಅನುಭವಗಳನ್ನು ಭೂತ ಕಾಲದಿಂದ ವರ್ತಮಾನಕ್ಕೆ ಎಳೆಯುತ್ತಾನೆ. ಕೃತಿಗೆ ವರ್ತಮಾನವೇ ಮುಖ್ಯವಾಗುತ್ತದೆ. ಏಕೆಂದರೆ ಶ್ರೀನಿವಾಸನ ಅಸ್ತಿತ್ವ ಇರುವುದು ಈ ವರ್ತಮಾನದಲ್ಲಿಯೇ.

ನಿರೂಪಕ ತನ್ನ ಗೆಳೆಯನಿಗೆ ಕೊನೆಯ ಕಾಗದ ಬರೆದದ್ದು ಈ ಅಂಗಡಿ ಗ್ರಾಮಕ್ಕೆ ಬಂದಾಗ ತರುವಾಯ ಯಾವುದೇ ಕಾಗದ ಬರೆಯದ ನಿರೂಪಕ ತನ್ನ ಗೆಳೆಯನ್ನು ಭೇಟಿಯಾದದ್ದು ಗವಿಗುಡ್ಡಕ್ಕೆ ಬಂದ ಮೇಲೆ. ಹೀಗೆ ಪ್ರಾರಂಭವಾಗುವ ಕೃತಿ ಅನುಭವಗಳ ಬೆನ್ನುಹತ್ತಿ ನಡೆಯುತ್ತದೆ. ಆದರೆ ನಿರೂಪಣೆಯ ಕ್ರಮ ತರ್ಕಬದ್ಧವಾಗಿ ಈ ಅನುಭವಗಳನ್ನೇ ವಿಶ್ಲೇಷಿಸುತ್ತದೆ. ಹೀಗೆ ಸಾಂಪ್ರದಾಯಿಕ ಆಲೋಚನೆಗಳಿಗಿಂತ ಭಿನ್ನವಾದ ಅನ್ಯ ಶಿಕ್ಷಣದ ಮೂಲಕ ಗಿಟ್ಟಿಸಿಕೊಂಡ ವರ್ತಮಾನವನ್ನು ನೋಡುವ ಕ್ರಮಕ್ಕೆ ತೆರೆದುಕೊಂಡ ನಿರೂಪಕ ತನ್ನ ಅನುಭವಗಳನ್ನು ಹಾಗೂ ತಾನು ಗ್ರಹಿಸುವ ವಿಚಾರವನ್ನು ವೈಚಾರಿಕವಾಗಿ ಗ್ರಹಿಸುತ್ತಾನೆ. ಹೀಗೆ ತನ್ನ ಪರಿಸರಕ್ಕೆ ಅನ್ಯನಾಗಿ ಪರಕೀಯತೆಯನ್ನು ಅನುಭವಿಸುತ್ತಾನೆ. ಹೀಗೆ ಛಿದ್ರಗೊಂಡ ಅನುಭವಗಳಿಗೆ ಆಕಾರ ನೀಡುವ ಸಂರಚನೆಯಲ್ಲಿ ಆ ಸಮಾಜದ ಲೋಕಗ್ರಹಿಕೆಯನ್ನು ವಿವರಿಸಲಾಗುತ್ತದೆ.[2] ಮನುಷ್ಯನಿಗೂ ಸಮಾಜಕ್ಕೂ ಮತ್ತು ಪರಿಸರಕ್ಕೂ ಇರುವ ಸಂಬಂಧ 'ಸಂಘರ್ಷ' ಮತ್ತು ಅವುಗಳ ಮಧ್ಯೆ ನಡೆಯುವ ಬದಲಾವಣೆಯ ಪ್ರಕ್ರಿಯೆಗಳನ್ನು ಗುರುತಿಸುತ್ತ ಹೋಗುವುದು. ಅಂದರೆ ಇಡೀ ಸಮಾಜದ ಬದುಕಿನ ಅರಿವು ಕಾದಂಬರಿಯಾಗಿರುತ್ತದೆ. ಹಾಗೂ ವಾಸ್ತವವಾಗಿ ಮನುಷ್ಯನ ಸಾಮಾಜಿಕ ಬದುಕಿನಲ್ಲಿ ಆಗುವ ಸ್ಥಿತ್ಯಂತರಗಳ ಅಭಿವ್ಯಕ್ತಿ ಮಾಧ್ಯಮವಾಗಿಯೇ ಕಾದಂಬರಿ

ರೂಪುಗೊಂಡದ್ದು. ಹಾಗೂ ಒಂದು ವರ್ಗ ಮತ್ತೊಂದು ವರ್ಗದ ಜೊತೆ ಸೇರಿ ಆ ಸಮಾಜದ ಪರಿವರ್ತನೆ ಎಂಬುದು ಸಂಪೂರ್ಣವಾಗಿ ಬಿಗಿಯಾಗಿರುತ್ತದೆ. ಈ ಸಮಾಜದ ಸಂರಚನೆಯನ್ನು ಅರ್ಥೈಸಿಕೊಳ್ಳುವುಕ್ಕೆ ಹೊರಟಾಗ ಆ ಸಮಾಜ ಒಪ್ಪಿಕೊಡಿರುವ ನಂಬಿಕೆ, ಆಚಾರ ವಿಚಾರ ,ಸಂಪ್ರದಾಯ, ಗಂಡು ಹೆಣ್ಣು ಚಿಂತನೆಗಳ ವಿಚಾರದಲ್ಲಿ ಮೊದಲಿನಿಂದಲೂ ನಂಬಿಕೊಂಡು ಬಂದ ವಿಚಾರಧಾರೆ ವರ್ತಮಾನವನ್ನು ಹೇಗೆ ನಿಯಂತ್ರಿಸುತ್ತದೆ ಹಾಗೂ ಹೇಗೆ ನಿರ್ದೇಶಿಸುತ್ತದೆ ಎಂಬುದು ಕಾದಂಬರಿಯ ಲೋಕ ಗ್ರಹಿಕೆಯಾಗುತ್ತದೆ. ಎಂಬುದನ್ನು ನಿರೂಪಣೆಯ ಕ್ರಮದಲ್ಲಿ ಅಭಿವ್ಯಕ್ತಿಸಲಾಗುತ್ತದೆ. ಇದು ಸಸ್ಯೂರನ ಗ್ರಹಿಕೆಯನ್ನು ಇಟ್ಟು ನೋಡುವ ಕ್ರಮವಾಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ ಕಾದಂಬರಿಯ ಲೋಕದಲ್ಲಿ ವಾಸ್ತವ ಪ್ರಪಂಚದ ಲೋಕ ಗ್ರಹಿಕೆಯು ಮೈದಾಳುತ್ತದೆ. ಅದರ ಮೂಲಕ ಸಮಾಜದ ಲೋಕೋತ್ತರವಾದ ಭವಿಷ್ಯದ ಕಲ್ಪನೆಯನ್ನು ಕಾದಂಬರಿ ನೀಡುತ್ತದೆ. ಅಂದರೆ ಭವಿಷ್ಯ ಕಟ್ಟಿಕೊಳ್ಳಬೇಕಾದ ಅಥವಾ ಕಟ್ಟಿಕೊಡುವ ನಿರ್ಧಾರಗಳನ್ನು ಗ್ರಹಿಕೆಯಾಗಿ ನೀಡುತ್ತದೆ. ಆದ್ದರಿಂದಲೇ ಕಾದಂಬರಿ ಸ್ವೀಕರಿಸುವ ತಂತ್ರ, ಕಾಲವನ್ನು ನಿರ್ವಹಿಸುವ ಕ್ರಮ ಮುಖ್ಯವಾಗಿ ಮೂಡಿ ಬರುತ್ತದೆ.

'ಸ್ವರೂಪ' ಕಾದಂಬರಿಯ  ನಿರೂಪಕ ಹೇಳಿಕೊಳ್ಳುವ ಹಾಗೆ "ನಾನು ಉತ್ತಮ ಬರಹಗಾರ ತನ್ನ ಅನುಭವಗಳನ್ನು ವ್ಯಕ್ತ ಪಡಿಸುವ ಸಮರ್ಥ ಮಾಧ್ಯಮಕ್ಕಾಗಿ ಹಾಗೂ ತನ್ನ ಪ್ರತಿಭೆಯನ್ನು ಎರಕ ಹುಯ್ಯಲು ತಕ್ಕ ಅನುಭವ ಒಂದಕ್ಕಾಗಿ ಶ್ರಮಿಸುತ್ತಿರುವ ಲೇಖಕ, ಅನುಭವಕ್ಕಾಗಿ ನಾಗರೀಕ ಜಗತ್ತಿನ ಕೇವಲ ಮಾನಸಿಕ ರೋಗಗ್ರಸ್ತ ಅನುಭವ ಪರಿಸರವನ್ನು ತೊರೆದು–ಅಲ್ಲಾ ನಾನು ನಿನ್ನ ಕಲ್ಪನೆಯನ್ನು ಸರಿಯಾಗಿ ತಿಳಿಸುತ್ತಿಲ್ಲ. ಎನ್ನುವುದನ್ನು ಒಪ್ಪುತ್ತೇನೆ. ಅಂತೂ ಅದರ ದಿಕ್ಕನ್ನಾರು ತೋರಿಸುತ್ತಿದ್ದೇನೆಯೇ ?"[2] ಹೀಗೆ ಕೃತಿಕಾರ ತಾನು ಹೋಗ ಬಯಸುವ ದಿಕ್ಕನ್ನು ಹಾಗೂ ತಾನು ತೋರಬಯಸುವ ವೈಚಾರಿಕ ತರ್ಕವನ್ನು ಓದುಗನ ಮುಂದಿಡುತ್ತಾನೆ.

"ಕನ್ನಡದ ಸಾಹಿತಿಯಾಗಬೇಕಾದವನು ಮೊದಲು ಬ್ರಾಹ್ಮಣ ದ್ವೇಷಿಯಾಗಬೇಕಾಗುವುದು ಅನಿವಾರ್ಯ ಹಾಗೂ ನ್ಯಾಯ."[4] ಎಂದು  ಹೇಳುವ ನಿರೂಪಕ ಕನ್ನಡ ಸಾಹಿತ್ಯ ಮೊದಲಿನಿಂದ ಅಂದರೆ ಆದಿಕವಿಯಿಂದ ಹಿಡಿದು ಇಲ್ಲಿಯ ವರೆಗೂ ಸಹ ಸಂಪ್ರದಾಯಗಳ ದ್ವೇಷಿಯಾಗಿಯೇ ಕೃತಿ ರಚನೆಮಾಡಿರುವುದನ್ನು ವೈಚಾರಿಕವಾಗಿಯೇ ಗ್ರಹಿಸುತ್ತಾನೆ. ಮುಂದುವರೆದು ನಿರೂಪಕ " ಬುದ್ಧಿ ಎಂದರೆ ತಿಳುವಳಿಕೆ ಎಂದರೆ ಇನ್ನೇನು ! ಹಳೆಯ ಘಟನೆಗಳ ಹಿನ್ನಲೆಯಲ್ಲಿ ವರ್ತಮಾನವನ್ನು ಕುರಿತು ಆಲೋಚಿಸುವುದು ತಾನೆ !" ಹೀಗೆ ಸ್ತ್ರಿ ಯನ್ನು ಕಾಲೇಜಿನ ಬಳಿ ಬಿಟ್ಟೆ. ಎಂದು ಹೇಳುವ ನಿರೂಪಕ ಈ ಸಂದರ್ಭವನ್ನು ಲಾಭಕ್ಕಾಗಿ ಗ್ರಹಿಸುತ್ತಾನೆ. ಅದನ್ನು ಈ ರೀತಿಯಾಗಿ ತನ್ನ

ಗೆಳೆಯನಿಗೆ ವಿವರಿಸುತ್ತಾನೆ  ಇದನ್ನು ಒಳ್ಳೆಯತನವೆಂದು ತಿಳಿದಿದ್ದೀಯಾ ಹೇಮ? ಆವಾಗಿನ ಪ್ರತಿಯೊಂದು ಪೂರ್ವಾಲೋಚನೆಯಿಂದ ಸಿದ್ದಪಡಿಸಿದ ಪೂರ್ವ ನಿರ್ದೇಶಿತವಾದ ನಡವಳಿಕೆಯಾಗಿತ್ತು. ಹೇಮಾ. ಎಂಥ ಸಂದರ್ಭದಲ್ಲೂ ನನ್ನ ಒಳಗಿನ ಒಂದು ಅತಿ ಬುದ್ಧಿವಂತಿಕೆ ನನಗೂ ಬಹಿರಂಗಕ್ಕೂ ನಡುವೆ ಸಟ್ಟನೆ ಉದ್ಭವಿಸಿ ನನ್ನ ಯಾವ ವರ್ತನೆಯೂ ಸರಳವಾಗದಂತೆ ಸಮಯಸ್ಫೂರ್ತವಾಗದಂತೆ ಮಾಡಿ ಬಿಡುತ್ತದೆ ಎಲ್ಲವೂ ಒಂದು ನಾಟಕ. ಒಂದೆರಡು ಸಾರಿ ಅಭ್ಯಾಸ ಮಾಡಿಕೊಂಡಂತೆ ನಿರ್ವಹಿಸುತ್ತೇನೆ.... ಪ್ರತಿಕ್ರಿಯೆಗೂ ಮೊದಲು ಪರ್ಯಾಲೋಚಿಸುತ್ತೇನೆ. ಹೇಗೆ ನಡೆದರೆ ನನಗೆ ಲಾಭ ಎಂದು. ಬದುಕು ಎಂದರೆ ನನಗೆ ಅನಂತವೂ ಬುದ್ಧಿವಂತವೂ ಆದ ತಂತ್ರ, ರಾಜತಂತ್ರ."[4]ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಇಂಗ್ಲಿಷ್ ಶಿಕ್ಷಣ ಹಾಗೂ ಸಾಹಿತ್ಯ ಓದಿದವರಿಗೆ ಪ್ರಜ್ಞಾಪೂರ್ವಕವಾಗಿ ಇಲ್ಲಿನ ಸಂಸ್ಕೃತಿಗಿಂತ, ಅಲ್ಲಿನ ಸಂಸ್ಕೃತಿ ರೂಢಿಸಿಕೊಂಡ ವ್ಯಕ್ತಿ, ಸ್ವಾತಂತ್ರ್ಯವನ್ನು ಹೋಲಿಸಿಕೊಂಡಾಗ ಸಾಮಾನ್ಯವಾಗಿ ವ್ಯಕ್ತಿಗೆ ಇಲ್ಲಿಯ ಬದುಕು ಮತ್ತು ಸಮಾಜದೊಡನೆ ಬಿರುಕು ಆರಂಭವಾಯಿತು. ಆದ್ದರಿಂದ "ಮನುಷ್ಯತ್ವ " ದ ಪರಿಕಲ್ಪನೆಯನ್ನು ಪುನರ್ ರೂಪಿಸಿಕೊಳ್ಳಬೇಕಾದ ವಾತಾವರಣ ಕಲ್ಪಿಸಿತು. ಹಾಗಾಗಿ ಮನುಷ್ಯ ತಾನಿರುವ ಜಗತ್ತಿಗೂ ಹೊರಗಿನ ಪ್ರಪಂಚಕ್ಕೂ ಇರುವ ಸಂಬಂಧದ ಹುಡುಕಾಟದಲ್ಲಿ ತೊಡಗಿದ ಇಂತಹ ಸಂದರ್ಭಗಳಿಗೆ ಸ್ವರೂಪ ಕೃತಿಯ ನಿರೂಪಕನು ತೆರೆದುಕೊಳ್ಳುತ್ತಾನೆ. ಮನುಷ್ಯ ಇಂತಹ ಸಂದರ್ಭಗಳಲ್ಲಿ ತನ್ನ ಕ್ರಿಯೆಗೆ ತಾನೇ ಜವಾಬ್ದಾರನಾಗಬೇಕಾದ ತನ್ನ ಬದುಕಿನ ಮೌಲ್ಯವನ್ನು ತಾನೇ ರೂಪಿಸಿಕೊಳ್ಳಬೇಕಾದ ಹೊಣೆಗಾರಿಕೆಯನ್ನು ಹೊತ್ತುಕೊಂಡ ಇಂತಹ ಸಂದರ್ಭಗಳಲ್ಲಿ ಸಾಂಕೇತಿಕವಾಗಿ ರೂಪಿಸಲ್ಪಡುವ ಘಟನೆಗಳು, ಸನ್ನಿವೇಶಗಳು ಮನುಷ್ಯನ ಮೂಲಭೂತ ಸ್ಥಿತಿಯನ್ನು ಹೇಳಲು ಪ್ರಯತ್ನಿಸುತ್ತಾನೆ.

ಕಥಾ ನಿರೂಪಣೆಯಲ್ಲಿ ನಿರೂಪಕ "ನನ್ನ ಯೋಗ್ಯತೆ ಏನೆಂದು ನಾನು ಕಂಡುಕೊಳ್ಳಬೇಕಾಗಿದೆ. ಘಟನೆ ಘಟನೆಗಳನ್ನೇ ಹಿಡಿದೆತ್ತಿ ನನ್ನ ಸ್ವರೂಪವನ್ನು ನಾನು ನಿರ್ಮಾಣ ಮಾಡಬೇಕಾಗಿದೆ."[5] ಎಂದು ನಿರ್ಣಯಿಸುತ್ತಾನೆ. ಏಕೆಂದರೆ ಘಟನೆಗಳಲ್ಲಿ ಸನ್ನಿವೇಶಗಳನ್ನೂ ಲಾಭದಾಯಕವಾಗಿ ಮಾಡಿಕೊಳ್ಳಲು ನಾನಾ ರೀತಿಯ ಪ್ರಯತ್ನಗಳನ್ನು ಮಾಡುತ್ತಾನೆ ಸನ್ನಿವೇಶಗಳಿಗೆ ತಕ್ಕಂತೆ ಸಮಯ ಸಾಧಕನಾಗುತ್ತಾನೆ. ಹಾಗೂ ತನ್ನ ವ್ಯಕ್ತಿತ್ವವನ್ನೇ 'ಆಗುವಿಕೆ'ಯ ಕಡೆಗೆ ಚಲಿಸುವ ಹಾಗೆ ಮಾಡುತ್ತಾನೆ. ಹೀಗೆ ತನ್ನ ಅಸ್ತಿತ್ವದಿಂದಾಗಿಯೇ ತನಗೆ ಬೇಕಾದ ಅಂತಃಸತ್ವವನ್ನು ರೂಪಿಸಿಕೊಂಡು ತನ್ನದೇಬಯಕೆಯ ಜಗತ್ತಿನ ಮಾದರಿಗೆ ಅನುಗುಣವಾಗಿ ಬದುಕು ಕಟ್ಟಿಕೊಳ್ಳಲು ಹವಣಿಸುವುದನ್ನು ಈ ಹಂತದಲ್ಲಿ ನೋಡಬಹುದು. ಏಕೆಂದರೆ ಜಗತ್ತಿನ

ಸಂಘರ್ಷಕ್ಕಿಂತ ಮಾನಸಿಕವಾಗಿ ವ್ಯಕ್ತಿ ತನ್ನತನ ಮತ್ತು ಸಾಮಾಜಿಕತೆಯ ನಡುವೆ ಅನುಭವಿಸಿದ ಸಂಘರ್ಷವಿದು.

'ಸ್ವರೂಪ' ಕೃತಿಯ ಶ್ರೀನಿವಾಸ ತನ್ನ ಗೊಂದಲಗಳಿಂದ ಹೊರ ಬರುವ ದಾರಿಗಳನ್ನು ಹುಡುಕುತ್ತಾನೆ. ಮತ್ತು ಆಯ್ಕೆಯ ಜವಾಬ್ದಾರಿಯ ಕ್ರಿಯೆಯಲ್ಲಿ ತೊಡಗಬೇಕಾದ ಅನಿವಾರ್ಯತೆಯ ಅನಿಶ್ಚಿತತೆಯ ತೊಳಲಾಟದಲ್ಲಿ ಕಂಡು ಕೊಳ್ಳಬೇಕಾದ ದಾರಿಗಳ ಹುಡುಕಾಟದ ಸವಾಲನ್ನು ಎದುರಿಸುವಾಗ ಮಾನಸಿಕವಾಗಿ ಗೊಂದಲಕ್ಕೆ ಸಂದಿಗ್ದತೆಗೆ ಸಿಲುಕುತ್ತಾನೆ. ಇಂತಹದ್ದರ ಚಿತ್ರಣವನ್ನೇ ಕಾದಂಬರಿ ವಸ್ತುವಾಗಿ ಆಯ್ಕೆ ಮಾಡಿಕೊಂಡಿದೆ.

ಸ್ವರೂಪ ಕಾದಂಬರಿಯ ನಿರೂಪಕನಾದ ಶ್ರೀನಿವಾಸನ ವ್ಯಕ್ತಿತ್ವ ಹಾಗೂ ಅವನ ಹೊರ ಬದುಕಿನ ನಡುವೆ ಬಿರುಕುಂಟಾಗಿ ತನ್ನ ಅಸ್ತಿತ್ವದ ಬಗ್ಗೆ ಆಲೋಚಿಸುವ ಅವಶ್ಯಕತೆ ಉಂಟಾಗುತ್ತದೆ. ಈ ಸಂದರ್ಭಗಳು ಹೊಸ ಚಿಂತನೆಗಳಿಗೂ ಮುಖ ಮಾಡಿ ನಿಂತಿರುವುದನ್ನು ಗಮನಿಸಬಹುದು, ಬದುಕಿನ ಕ್ರಮದಲ್ಲಿ ಶ್ರೀನಿವಾಸನಿಗೆ ಇರುವಿಕೆಗೆ ಸಂಬಂಧಿಸಿದಂತೆ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ ತನ್ನ ಬದುಕಿನ ಕ್ರಮಕ್ಕೆ ತೆರೆದುಕೊಂಡ ಶ್ರೀನಿವಾಸ ತಾನೇ ತಾನಾಗಿ ಯಾಂತ್ರಿಕತೆಯೊಂದನ್ನು ಸೃಷ್ಠಿ ಮಾಡಿ ಕೊಂಡು ತನ್ನ ವೈಯಕ್ತಿಕ ಜಗತ್ತನ್ನೇ ವಾಸ್ತವವೆಂದು ಭ್ರಮಿಸಿರುತ್ತಾನೆ. ಆದ್ದರಿಂದಲೇ ವೈಯಕ್ತಿಕ ಮಿತಿಗಳಿಗೆ ಬರುವ ಕ್ರಿಯೆಗಳೇ ಇಲ್ಲಿ ಪ್ರತ್ಯೇಕ ಜಗತ್ತಾಗಿ ರೂಪುಗೊಂಡಿರುತ್ತವೆ.[6] ಹೇಮಂತ ಮತ್ತು ಶ್ರೀನಿವಾಸರ "ವ್ಯಕ್ತಿತ್ವದಲ್ಲಿ ಆರಾಧಿಸಿದ ಸೋಷಿಯಲಿಸಂ, ಶೋಷಣೆ ಎನ್ನುವ ಮೂರಕ್ಷರದ ಪದ ಹಣ ಕಂಡೊಡನೆ ದಿಗಿಲು ಬಿಳುವಂತೆ ಮಾಡುತ್ತದೆ, ಆದರೆ ನಾನು ಇಲ್ಲಿ ಬಂದು ಅದಕ್ಕಿಂತ ಅನ್ಯವಾದುದೊಂದನ್ನು ನೊಡಿದೆ. ಶೋಷಣೆ ಕೇವಲ ಬಂಡವಾಳಗಾರನಿಗೆ ಸೀಮಿತವಲ್ಲ ಎನ್ನುವುದು. ಈ ವಿಚಾರವನ್ನು ಹೇಮಂತನಿಗೆ ಶ್ರೀನಿವಾಸ ವಿವರಿಸುತ್ತಾನೆ.[8]

ಮುಂದೆ ಸಾಂಕೇತಿಕವಾಗಿ ವಿವರಿಸುವ ಘಟನೆಗಳ ವಿವರಣೆಯನ್ನು ನೋಡಿದಾಗ ಹೊರಬದುಕಿನಲ್ಲಿ ಉಂಟಾಗುವ ಬದುಕಿನ ಮೂಲಕ ಹುಡುಕುವ ಕ್ರಮ ಈ ರೀತಿಯಾಗಿದೆ "ದಿನಾ ಕೆಲಸ ಮಾಡಿದ್ದರ ಮೇಲೆ ನಾಲ್ಕಾಣೆ ಹೆಚ್ಚಿಗೆ ಕಿತ್ತು, ಸಾಲಾಮಾಡಿ ಸಂತೆಗೆ ಹೋಗಿ ಕಜ್ಜಿ ತುರಿಸುತ್ತಾ ಕಾಲ ಕಳೆದು ಗದ್ದೆಯನ್ನೆಲಾ ಹಾಳು ಮಾಡಿ ನಮ್ಮ ಚಿಕ್ಕಪ್ಪನನ್ನು ಶೋಷಿತರೆ ಶೋಷಿಸಿದ್ದು ಬೇರೆತರದ ಶೋಷಣೆ, ಸೋಷಿಯಲಿಸಂಗೆ ಸಿಕ್ಕುವುದು ದುಡಿಸಿ ಉತ್ಪಾದನೆ ಮಾಡಿದವನ ಶೋಷಣೆ, ಇನ್ನೊಂದು ಅನ್ಯತರದ್ದು ಅದರ ಹಿಡಿತಕ್ಕೆ ಸಿಗುವುದಿಲ್ಲ, ನನಗೆ ನಮ್ಮ ಗದ್ದೆಯ ಬಾಂದುಗಳನ್ನು ಪತ್ತೆ ಹಚ್ಚಬೇಕಾದರೆ ನೂರಾರು ರೂಪಾಯಿ ಖರ್ಚಾಯಿತು. ಶೋಷಣೆ ಒಂದಲ್ಲ ಒಂದು ರೀತಿಯಲ್ಲಿ

ಅನಿವಾರ್ಯ. ಇಲ್ಲ ಉತ್ಪಾದಿಸಲು ಶೋಷಿಸಬೇಕು. ಇಲ್ಲ ಹಾಳು ಮಾಡಲು ಶೋಷಿಸಬೇಕು. ನಾನು ಇಲ್ಲಿಗೆ ಬಂದಾಗ ಈ ಎರಡಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಯ್ತು".[7] ಹೀಗೆ ಸಮಸ್ಯೆಗೆ ತೆರೆದುಕೊಂಡ ಶೀನಿವಾಸ ತನ್ನ ವೈಯಕ್ತಿಕ ಜಗತ್ತನ್ನೇ ವಾಸ್ತವವೆಂದು ಭ್ರಮಿಸಿರುತ್ತಾನೆ, ಹಾಗೂ ತನ್ನ ಬದುಕಿನ ಕ್ರಿಯೆಗಳೇ ಇಲ್ಲಿ ಪ್ರತ್ಯೇಕ ಜಗತ್ತಾಗಿ ರೂಪುಗೊಂಡಿದೆ.

ಶ್ರೀನಿವಾಸ ಗವಿಗುಡ್ಡಕ್ಕೆ ಬಂದ ನಂತರ ಹಿಂದಿನ ಅನುಭವಗಳಿಗೆ ಇಲ್ಲಿನ ಅನುಭವಗಳನ್ನು ಮುಖಾಮುಖಿ ಮಾಡುತ್ತಾನೆ. ತನಗೆ ಇಲ್ಲಿಯವರಗಿನ ತಿಳುವಳಿಕೆಯ ವಾಸ್ತವವನ್ನು ತಿಕ್ಕಿ ನೋಡುತ್ತಾನೆ. ಇಂತಹ ಸಂದರ್ಭದಲ್ಲಿ ಶ್ರೀನಿವಾಸನ ಬದುಕು ಸಂಪೂರ್ಣ ಬೇರೆಯಾಗಿಯೇ ಕಾಣಿಸುತ್ತದೆ.

ಮುಂದೆ ಮತ್ತೊಂದು ಅನುಭವಕ್ಕೆ ತೆರೆದುಕೊಂಡ ಶ್ರೀನಿವಾಸ ಈರಪ್ಪನ 'ಮಾನಸಿಕ ಲೋಕ' ಹಾಗೂ ನಂಬಿಕೆಯನ್ನು ಅವನ ಸಂಪ್ರದಾಯ ಲೋಕದ ಮೂಲಕ ಅರ್ಥೈಸಿಕೊಳ್ಳದೆ ನಿರೂಪಕ ಸೋಲುತ್ತಾನೆ. ಈರಪ್ಪನ ಮಾನಸಿಕ ಲೋಕ ಶ್ರೀನಿವಾಸನಿಗೆ ಇನ್ನೂ ಅವಲಕ್ಷಣಗಳಿಂದ ಕೂಡಿದುದಾಗಿ ತೋರುತ್ತದೆ. ಏಕೆಂದರೆ ಒಂದು ದಿನ ನಿರೂಪಕನ ಮನೆಗೆ ಬಂದ "ಈರಪ್ಪ ಶ್ರೀನಿವಾಸನ (ನಿರೂಪಕ)ನ ಮನೆಗೆ ಎರಡು ಕುರಿ ಬಲಿಯಾಗ ಬೇಕೆಂದೂ, ಇಲ್ಲಿ ದೆವ್ವ ಕೇವಲ ಮಧ್ಯಾನ್ನದ ಹೊತ್ತಿನಲ್ಲೇ ಶಿಳ್ಳು ಹೊಡೆಯುತ್ತದೆಂದೂ ಹೇಳಿದರು. ನಾನು ನಕ್ಕೆನು. ಅವರು ಆ ಕಡೆಗೆ ತಿರುಗಿದಾಗ ಹಿಂದಿನಿಂದ ಶಿಳ್ಳೆ ಹೊಡೆದು ಅವರ ನಂಬಿಕೆ ದ್ವಿ ಗುಣಗೊಳಿಸಬೇಕೆಂದು ಯತ್ನಿಸಿದೆ. ಅವರು ನನ್ನ ಉಪಾಯ ತಿಳಿದು ನಕ್ಕರು. ಎಂಥ ನಾಟಕ ಆಡುತ್ತಾರೆ ಎಂದು ನಾನು ಒಳಗೊಳಗೇ ಅಂದುಕೊಂಡೆ ,ಜಿಪುಣರಿಗೆ ಶೋಷಕರಿಗೆ ಸಹಾಯ ಮಾಡುವುವು ಈ ಕೆಪಿಟ್‌ಲಿಸ್ಟ್ ಭೂತಗಳು, ಈರಪ್ಪನವರು ಕುರಿ ಕೊಡುವುದು ಕೆಲಸಗಾರರನ್ನು ಊರವರನ್ನೂ ನಂಬಿಸಲು ಅವರು ನಡೆಸುವ ನಾಟಕದಂಥ ಆಟವಾಗಿ ಕಂಡಿತು."[8] ಸಂಪೂರ್ಣವಾಗಿ ನಿರೂಪಕ ಆ ಪರಿಸರವನ್ನು ಹೊರಗಿನವನಾಗಿ ತನ್ನ ಪ್ರಜ್ಞಾಪೂರ್ವಕವಾದ ದೃಷ್ಟಿಕೋನದಿಂದ ನೋಡುವುದೇ ಆಗಿದೆ, ಈ ರೀತಿಯ ಚಿಂತನೆಗಳಿಂದ ಆ ಪ್ರಾದೇಶಿಕತೆಯ ಸಂರಚನೆಯಲ್ಲಿ ಅಲ್ಲಿನ ನಂಬಿಕೆ ಬದುಕಿನ ಕ್ರಮದ ಮೂಲಕ ಅವರ ಚಿಂತನೆ, ಆಲೋಚನೆ, ಗ್ರಹಿಕೆಗಳನ್ನು ಅರ್ಥೈಸಿಕೊಳ್ಳದೆ ಅದನ್ನು ವೈಚಾರಿಕತೆಯಿಂದ ಅರ್ಥೈಸಿಕೊಳ್ಳುವ ನಿರೂಪಕನು ಈರಪ್ಪನವರು ಕೇಳುವ ಕುರಿಗಳ ಬಲಿಯನ್ನು ಅಮಾನವೀಯ ನೆಲೆಯಿಂದ ಕಂಡುಕೊಂಡು ಇಂತಹ ಸ್ಥಿತಿಗಳಲ್ಲಿ ಮನುಷ್ಯನ ಅಸ್ತಿತ್ವವನ್ನೆ ಕುರುಪಗೊಳಿಸುತ್ತಿರುವ ಆಲೋಚನೆಗಳನ್ನು ಪ್ರಜ್ಞಾಪೂರ್ವಕವಾಗಿಯೇ ನಿರ್ಮಾಣವಾಗುತ್ತಿರುವ ಸಂದರ್ಭವನ್ನು ವಿಶ್ಲೇಷಿಸುವ ಹಾಗೂ ನಿರೂಪಕನಿಗೆ ಈ ವಿಷಮ ಸನ್ನಿವೇಶದಲ್ಲಿ ತನ್ನ ವ್ಯಕ್ತಿತ್ವವನ್ನು

ಉಳಿಸಿ ಕೊಳ್ಳುವಬಗೆ ಹೇಗೆ ಎನ್ನುವ ಆಲೋಚನೆಗಳ ಮೂಲಕ ಮುಖ್ಯವಾಗಿ ಅವನ ಬದುಕಿನ ಕ್ರಮದಲ್ಲೇ ಈ ಚಿಂತನೆಗಳು ರೂಪುಗೊಳ್ಳುವಂತಹವುಗಳಾಗಿವೆ ಹೀಗೆ ಆ ಸ್ಥಳೀಯತೆಯ ಚಿಂತನೆ ನೋಟಕ್ರಮಕ್ಕೆ ಭಿನ್ನವಾಗಿ ತನ್ನ ನೋಟಕ್ರಮದಿಂದ ಆ ಪರಿಸರಕ್ಕೆ ತನ್ನಗೆ ತಾನೆ ಪರಕೀಯನಾಗುತ್ತಾನೆ.

"ಈರಪ್ಪನವರು ತೋಳಿಗೆ ನಾನಾ ತರದ ಇಪ್ಪತ್ತು ತಾಯಿತಗಳನ್ನು ಕಟ್ಟಿ ಕೊಂಡಿದ್ದರು. ಆ ದಾರಗಳು ಎಷ್ಟೊಂದು ಹಿಂದೆ ಕಟ್ಟದ್ದವೋ ಏನೊ! ಚರ್ಮ ಹರಿದು ಮಾಂಸ ಗೋಚರ ವಾಗುತ್ತಿತ್ತು. ಅನೇಕ ಕಡೆ ನಾನು ಅದನ್ನು ನೋಡಿದನ್ನು ಈರಪ್ಪನವರು ನೋಡಲಿಲ್ಲ. ಕ್ರಮೇಣ ಆ ಬಗ್ಗೆ ಆಲೋಚಿಸಿದಂತೆ ಅವರ ಚಿತ್ತ ಸ್ಥಿತಿ ನಿಧಾನಕ್ಕೆ ಅರ್ಥವಾಗುತ್ತಾ ಬಂದಿತು. ಅವರ ನಂಬಿಕೆಯನ್ನು ನಿಷ್ಠೆಯನ್ನು ನಾನು ಹೇಗೆ ಲೇವಡಿ ಮಾಡಲಿ? ಹಾಗೆಂದು ದೆವ್ವದ ಬಗ್ಗೆ ನಂಬಿಕೆ ಬಂದಿತೆಂದಲ್ಲ. ನಂಬಿಕೆ ತರ್ಕಾತೀತವಾದದ್ದು."[9]

ಹೀಗೆ ನಿರೂಪಕ ತನ್ನ ಪರಿಸರದ ಅನುಭವಗಳನ್ನು ಸಂಪೂರ್ಣವಾಗಿ ಪ್ರಜ್ಞಾತಂತ್ರವಾದ ತರ್ಕಾತೀತವಾಗಿ ನಿರೂಪಿಸುತ್ತಾ ನಿಷ್ಕ್ರಿಯವಾದ ಮನುಷ್ಯನಿಗೆ ಯಾವುದೇ ಶೋಷಣೆಗಳಾಗಲೀ ಸಹಜವೆಂಬಂತೆ ಅನಿವಾರ್ಯವೆಂಬಂತೆ ಭಾವಿಸಲ್ಪಡುತ್ತವೆ. ಇದರ ಮೂಲಕ ಈರಪ್ಪನ ಸ್ವರೂಪ ಮನುಷ್ಯನ ಅಸ್ತಿತ್ವವನ್ನು ತಮ್ಮ ಲಾಭಕ್ಕಾಗಿ ಬಳಸಿಕೊಳ್ಳುವಂಥವುಗಳಾಗಿವೆ. ಇಲ್ಲಿ ನಿರೂಪಕ ತಾನು ಇದುವರೆಗೆ ಕಟ್ಟಿ ಬೆಳಸಿಕೊಂಡು ಬಂದಿರುವ ತನ್ನ ಹೊರ ರೂಪದಂತೆಯ ಎಲ್ಲರೂ ಎಲ್ಲವೂ ಇದೆ ಎಂದು ಭಾವಿಸಿದ ನಿರೂಪಕನಿಗೆ ಈರಪ್ಪನ ನಂಬಿಕೆ, ಶ್ರದ್ಧೆಗಳು ಎಷ್ಟು ಆಳವಾದವು ಎಂಬುದು ಅರಿವಾಗುತ್ತಿದೆ.

ಪ್ರಜ್ಞಾಪೂರ್ವಕವಾಗಿ ಬೆಳೆಸಿಕೊಂಡ ತರ್ಕಾತೀತ ನೋಟಕ್ರಮದ ಮೂಲಕ ನಮಗೆ ಏಕಾಂತ ಒಂದು ವಿಶೇಷ ಸೌಖ್ಯ ಕೊಡುತ್ತದೆ. ನಾವು ನಮಗಿಂತಲೂ ದೊಡ್ಡವರು ಎಂಬ ಭಾವನೆಯನ್ನು ತರುತ್ತದೆ. ಆಧ್ಯಾತ್ಮಿಕ ಏಕಾಂತವನ್ನು ಅನುಭವಿಸುತ್ತಾ ನನ್ನನ್ನು ಯಾರೂ ಅರ್ಥಮಾಡಿಕೊಂಡಿಲ್ಲ ಎನ್ನುವ ತನ್ನ ವೈಯಕ್ತಿಕ ಜಗತ್ತನ್ನೇ ವಾಸ್ತವವೆಂದು ಭ್ರಮಿಸುವ ಆಲೋಚನೆಗಳು ಈ ರೀತಿಯಾಗಿ ಕಂಡು ಬರುತ್ತವೆ. "ಒಂದು ರೀತಿಯ ಈರಪ್ಪನನ್ನು ಅರ್ಥೈಸಿಕೊಂಡರು ತನ್ನ ಆಧ್ಯಾತ್ಮ ಎಂಬುದು ಎಷ್ಟರ ಮಟ್ಟಿಗೆ ಬರಿಯ ಮಾತಿನದ್ದು ಎಂಬುದು ಮೈಸೂರಿನ ಕಾಫಿ ಕ್ಲಬ್ಬಿನಲ್ಲಿ ಕುಳಿತು 5 ಗಂಟೆಯಾದರೂ ತನ್ನ ಗೆಳೆಯರು ಬಂದಿಲ್ಲವೆಂದು ತಿಳಿದು ಇಡ್ಲಿ, ತಿನ್ನುತ್ತಾ ಇರಬೇಕಾದ ಸಂದರ್ಭದಲ್ಲಿ ಬಂದ ಬಿಕ್ಷುಕನನ್ನು ನೋಡಿ ತನ್ನ ಬಳಿಗೆ ಬರುವುದಿಲ್ಲವೆಂದು ತಿಳಿದನು ಆದರೂ

ಕೂಡ ಅವನು ನೇರವಾಗಿ ನಿರೂಪಕನ ಬಳಿಗೆ ಬಂದು ಕೈ ಚಾಚುತ್ತಾನೆ, ಇದರಿಂದ ಅಸಹನೆಯನ್ನು ತಡೆಯಲಾರದೆ ಎದ್ದೆ, ಎದ್ದು ಚಮಚವನ್ನು ಕೋಪದಿಂದ ತಟ್ಟೆಗೆ ಬಿಸಾಕಿ ಮ್ಯಾನೇಜರನನ್ನು ಕರೆದೆ".[10] ಆ ಸಂದರ್ಭದಲ್ಲಿ ಬಿಕ್ಷುಕನ ಜೊತೆಗೆ ವರ್ತಿಸಿದ ವರ್ತನೆ ಅವನಿಗೆ ಅರಿವಾಗುತ್ತದೆ. ಹಾಗೂ ಜಾತಿಯತೆಯನ್ನು ವಿರೋಧಿಸುತ್ತಲೇ ಅದರ ಬಗ್ಗೆ ವ್ಯಂಗವಾಗಿ ಮಾತನಾಡುತ್ತಲೇ ಅದನ್ನು ಬಳಸಿಕೊಂಡೇ, ಬದುಕಲು ಹವಣಿಸುವ ಶ್ರೀನಿವಾಸನಿಗೆ ಉಳಿದವರು ಸಮಯ ಸಾಧಕರು ಸ್ವಾರ್ಥಿಗಳಂತೆ ಕಾಣಿಸಿಕೊಳ್ಳುತ್ತಾರೆ.

ಶಿಕಾರಿ ಮಾಡುತ್ತಿರುವ ಶ್ರೀನಿವಾಸನಿಗೆ ನಿಜವಾಗಿಯೂ ಶಿಕಾರಿಯೇ ಇವನನ್ನು ಶಿಕಾರಿ ಯಾಡುತ್ತಿದೆಯೇ,? ಎಂಬುದು ಸಂಶಯವಾಗಿ ಕಾಡುವ ಅಂಶವಾಗಿದೆ ಏಕೆಂದರೆ ಶಿಕಾರಿ ಮಾಡಲು ಹೋದ ಶ್ರೀನಿವಾಸ ತಾನು ಮಾಡಿದ ತಪ್ಪಿನ ಹೊಣೆ ನನ್ನದು ಮಾತ್ರವಲ್ಲ. ಅದು ಎಲ್ಲಾರದ್ದು ಎಂದು ವಿವರಿಸುತ್ತಾನೆ ಆದ್ದರಿಂದಲೇ ಶ್ರೀನಿವಾಸ ಶಿಕಾರಿ ಮಾಡುತ್ತಿದ್ದಾನೇಯೋ? ಅಥವಾ ಶಿಕಾರಿಯೇ ಸಂಪೂರ್ಣವಾಗಿ ಶ್ರೀನಿವಾಸನನ್ನು ಶಿಕಾರಿ ಮಾಡುತ್ತಿದ್ದೇಯೊ ಎಂಬುದನ್ನು ನಾವು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಏಕೆಂದರೆ ತಾನು ಜವಾಬ್ದಾರನಾಗಬೇಕಾದ ಅಪರಾಧಗಳನ್ನೆಲ್ಲಾ ತರ್ಕದ ಎದುರು ನಿಲ್ಲಿಸಿ ತನ್ನ ಅಪರಾಧ ಏನೂ ಇದರಲ್ಲಿ ಇಲ್ಲ ಎಂದು ಸಾಬೀತು ಪಡಿಸುವವನಾಗಿ ಕಾಣುತ್ತಾನೆ. ಹಾಗಾಗಿ ಇಡೀ ಕೃತಿಯಲ್ಲಿ ನಿರೂಪಕನಾದ ಶ್ರೀನಿವಾಸನಿಗೆ ಕಾಡುವ ಮೌನ ಯಾವ ಬಗೆಯದ್ದು ಎಂಬ ಅನುಮಾನ ಬರುತ್ತದೆ.

ದಿನ ನಿತ್ಯದ ಜೀವನದ ಮೇಲೆ ಎರಗಿದ ಸಂದರ್ಭಗಳಲ್ಲಿ ತನ್ನ ಸಮತೋಲನವನ್ನು ಕಳೆದುಕೊಳ್ಳುವ ಈ ಜೀವನ ಕ್ರಮದ ಲಕ್ಷಣಗಳು ಮೇಲ್ನೋಟಕ್ಕೆ ಭಗ್ನಗೊಂಡ ಅವಶೇಷಗಳಂತೆ ಕಾಣಿಸುತ್ತವೆ. ಪರಕೀಯವಾದ ಈ ಆಕ್ರಮಣ ಮೊದಲಿಗೆ ಈ ಜೀವನ ಕ್ರಮವನ್ನು ಕಬಳಿಸುವ ಹಾಗೆ ತೋರುತ್ತದೆ ಹಾಗೂ ಭಯಂಕರ ಸ್ವರೂಪದ್ದಾಗಿ ಕಾಣಿಸುತ್ತದೆ. .ಏಕೆಂದರೆ ನಿರೂಪಕ ಎತ್ತುತ್ತಿರುವ ಪ್ರಶ್ನೆ ಅವನೊಳಗಿನ ಅವನ ಸ್ವರೂಪವನ್ನು ಮಾತ್ರ ತೋರಿಸುವುದಾಗಿರದೆ ಮಾನವ ಸಮುದಾಯ ಆದರ್ಶ ಮತ್ತು ವಾಸ್ತವದ ದ್ವಂದ್ವದಲ್ಲಿ ಸಿಕ್ಕಿ ಹಾಕಿಕೊಂಡಿರುವ ಬಗೆಯಾಗಿದೆ. ಇವುಗಳ ಜೀವನದ ಸತ್ಯ ಯಾವುದೆಂದು ಅರಿಯದೆ ಒದ್ದಾಡುವ ಪರಿ ಇದೆ. "ಸತ್ಯವಾಗಿಯೂ ಹೇಳಬೇಕೆಂದರೆ ಯಾವುದು ಇದರಲ್ಲಿ ಸತ್ಯ ಎಂದೇ ನನಗೇ ತೋಚುವುದಿಲ್ಲ. ಜೀವನದ ತೊಂದರೆಯೇ ಇದು. ಎಲ್ಲ ಘಟನೆಗಳೂ ಯಾವುದೋ ಒಂದೇ ಒಂದು ಸತ್ಯಕ್ಕೆ ದಾರಿ ಮಾಡಿ ಕೊಡದೆ ತನ್ನ ವಿರುದ್ಧವನ್ನು ಪ್ರತಿಪಾದಿಸುವುದು."[11]

ಹೀಗೆ ತನ್ನನ್ನು ಶೋಧಿಸಿಕೊಳ್ಳುತ್ತಾ ಹೋಗುವ ಶ್ರೀನಿವಾಸನಿಗೆ " ನಾನು ಸದಾ ನನ್ನಲ್ಲೇ ಉಳಿಸಿ ಪೋಷಿಸಿಕೊಂಡು ಬಂದ ನನ್ನ ಆ ಇನ್ನೊಂದು 'ನಾನು' ನಿಧಾನವಾಗಿ ಮಂಜಾಗತೊಡಗಿತು ಎನ್ನಿಸುತ್ತದೆ.[12] "ಆ ಇನ್ನೊಂದು ನಾನು" ಎನ್ನುವುದು ಜಗತ್ತಿಗೆ ತೋರ್ಪಡಿಸಿಕೊಳ್ಳುತ್ತಿದ್ದ ಸ್ವರೂಪವು ಮರೆಯಾಗಿ, ತನ್ನದೇ ಸ್ವರೂಪ ಕಾಣಿಸುತ್ತಾ ಹೋಗುತ್ತದೆ. ಅದರೊಳಗಿನ ಸ್ವಾರ್ಥ, ಅಮಾನವೀಯತೆ ತನ್ನೆಲ್ಲಾ ಮುಖದೊಡನೆ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಆ ಸ್ವರೂಪವನ್ನು ಎದುರಿಸಲಾರದಾದಾಗ ಕಾಡುವ ಮೌನ ಕತ್ತಲಾಗಿ ಉರಿಯುವ ಬೆಂಕಿಯಾಗಿ ಅವನನ್ನು ಮುತ್ತುತ್ತದೆ. ಆದರೆ ಮಾನವ ಕುಲವೇ ತನ್ನ ಬದುಕಿನ ಹಂಬಲದ ಗುಣದೊಂದಿಗೆ ಹೀಗೆ ಬದುಕುತ್ತಾ ವಾಸ್ತವವನ್ನು ಸೃಷ್ಟಿಸುತ್ತಿರುವಾಗ ಅಲ್ಲಿ ತಾನೊಬ್ಬನೇ ಹೇಗೆ ಅಪರಾಧಿಯಾಗುತ್ತೇನೆ ಎಂಬ ಶ್ರೀನಿವಾಸನ ಪ್ರಶ್ನೆ ತಾತ್ವಿಕತೆಯದ್ದೇ.

ಇಲ್ಲಿ ತರ್ಕದ ಮೂಲಕ ಮನುಷ್ಯನ ದುರಂತ ಸ್ಥಿತಿಯನ್ನು ಮಂಡಿಸುತ್ತಾ ಹೋಗುವ ತೇಜಸ್ವಿ, ಅನುಭವವು ವಾಸ್ತವತೆಯ ಭಿನ್ನ ಮುಖಗಳನ್ನೂ ತೆರೆದು ತೋರಿಸುತ್ತಲೇ ಅದರೊಡನೆ ಮನುಷ್ಯನ ಸಂಬಂಧವನ್ನು ಬಿಚ್ಚಿ ತೋರಿಸುತ್ತಾ ಮತ್ತಷ್ಟು ಅವನ ಅಸಹಾಯಕತೆಯನ್ನು ಎತ್ತಿ ಹಿಡಿಯುತ್ತದೆ.

ಹೀಗೆ "ಕೃತಿಯೊಂದರ ರಾಚನಿಕ ಸ್ವರೂಪಕ್ಕೂ ಶೈಲಿಗೂ ಸಂಬಂಧವಿರುತ್ತದೆ. ಕಥೆ ಭಾಷೆಯಲ್ಲಿ ಅಭಿವ್ಯಕ್ತ ಸೂಕ್ಷ್ಮತೆಯನ್ನು ಸಾಧಿಸಲು ಸಾಧ್ಯವೋ, ಹಾಗೆಯೆ ಕಾದಂಬರಿಗೂ ಆ ಸಾಧ್ಯತೆ ಇದೆ. ಅನುಭವ ಅಭಿವ್ಯಕ್ತಿಗಳ 'ಐಕ್ಯತೆ' ಕಾದಂಬರಿಯಲ್ಲಿಯೂ ಸಾಧಿಸಬೇಕಾದ 'ಗುರಿ' ಆಗಿದೆ ಎಂದು ಸುರೇಶ್ ಪಾಟೀಲ್ ರವರು ಕಾದಂಬರಿ ಮೀಮಾಂಸೆಯಲ್ಲಿ ಹೇಳಿದ್ದನ್ನು ಈ ಸಂದರ್ಭದ ಮೂಲಕ ಅರ್ಥ ಮಾಡಿಕೊಳ್ಳಬಹುದಾಗಿದೆ.

ಅಡಿಟಿಪ್ಪಣಿ

1. ಕೆ. ಪಿ. ಪೂರ್ಣಚಂದ್ರ ತೇಜಸ್ವಿ ; ಸ್ವರೂಪ, ಪುಸ್ತಕ ಪ್ರಕಾಶನ , ಆರನೆಯ ಮುದ್ರಣ 2007 ಪುಟ 56
2. – ಅದೇ – ಪುಟ. 62 – 63
3. – ಅದೇ – ಪುಟ. 65
4. – ಅದೇ – ಪುಟ. 66 – 67
5. – ಅದೇ – ಪುಟ. 67

6. ಕೆ . ಪಿ. ಪೂರ್ಣಚಂದ್ರ ತೇಜಸ್ವಿ ; ಸ್ವರೂಪ, ಪುಸ್ತಕ ಪ್ರಕಾಶನ , ಆರನೆಯ ಮುದ್ರಣ 2007 ಪುಟ 58

7. – ಅದೇ – ಪುಟ. 59

8. – ಅದೇ – ಪುಟ. 60

9. – ಅದೇ – ಪುಟ. 72

10. – ಅದೇ – ಪುಟ. 80

11. – ಅದೇ –ಪುಟ. 82

12. ಡಾ. ಸುರೇಶ ಪಾಟೀಲ ; ಕಾದಂಬರಿ ಮೀಮಾಂಸೆ, ಸಿವಿಜಿ ಇಂಡಿಯಾ, ಪ್ರಥಮ ಮುದ್ರಣ 2011 ಪುಟ 89

# ಅಧ್ಯಾಯ – 5

## ಚಿದಂಬರ ರಹಸ್ಯ ಕಾದಂಬರಿಯಲ್ಲಿ ಮೂಡಿದ ವಸ್ತು ಮತ್ತು ತಂತ್ರ

ತಲೆಮಾರುಗಳ ಸಂಘರ್ಷದ ಮಾನಸಿಕ ವಿಶಿಷ್ಟ ಲೋಕವನ್ನು ವಿವರಿಸುವ ಈ ಕಾದಂಬರಿ ಆಧುನಿಕೋತ್ತರ ಕೃತಿಯಾಗಿದೆ. 80ರ ದಶಕದಲ್ಲಿ ಮೂಡಿಬಂದಿದೆ. ಭಾರತದ ಮತೀಯವಾದ ಘಟ್ಟದ ಚಲನೆಯನ್ನು ಚಿತ್ರಿಸುತ್ತಿದೆ. ಇದೇ ಇಂದಿನ ಸಮಕಾಲೀನ ಭಾರತದ ವಸ್ತು ಕಾದಂಬರಿಯ ವಸ್ತುವೂ ಹೌದು. ಈ ಕೃತಿ ಪ್ರಮುಖವಾಗಿ ಭೂತಕಾಲ ವರ್ತಮಾನವನ್ನು ಹೇಗೆ ನಿಯಂತ್ರಿಸುತ್ತದೆ. ಎಂಬುದನ್ನು ತಿಳಿಸುತ್ತದೆ. ಈ ಕೃತಿ ಸಮಕಾಲೀನ 25 ವರ್ಷದ ಮತೀಯ ಭಾರತದ ಶೋಧನೆಯನ್ನು ಮಾಡುತ್ತದೆ. ಆದ್ದರಿಂದ ಇದು ಒಂದು ಸಂಕಥನ ಇದರಲ್ಲಿ ಮುಖ್ಯವಾಗಿ ನಿರೂಪಕ ಸಂಕಥನಕ್ಕೂ ಸಾಮಾಜಿಕ ವರ್ತನೆಗಳಿಗೂ ಇದ್ದ ಸಂಬಂಧದ ಸ್ವರೂಪವನ್ನು ವಿವೇಚಿಸುತ್ತಾನೆ.

ಫುಕೋನ ಸಂಕಥನದ ಪರಿಕಲ್ಪನೆಯನ್ನು ಭಾಷೆಗೂ ಸಾಮಾಜಿಕ ಸಂಸ್ಥೆಗಳಿಗೂ ಇರುವ ಸಂಬಂಧವೆಂದು ವಿವರಿಸಬಹುದು. "ವಸ್ತು ಮತ್ತು ಅನುಭವಗಳಿಗೆ ರೂಪುಗೊಡುವ ಭಾಷೆಯನ್ನು ಸಾಮಾಜಿಕ ಸಂಸ್ಥೆಗಳು ನಿಯಂತ್ರಿಸುತ್ತವೆ ಈ ಭಾಷೆಯಿಂದ ನಾವು ಪಡೆಯುವ ಗ್ರಹಿಕೆಯೂ ಸಾಮಾಜಿಕ ಸಂಸ್ಥೆಗಳ ನಿರ್ಬಂಧಕ್ಕೆ ಪರೋಕ್ಷವಾಗಿ ಒಳಗಾಗಿರುತ್ತದೆ. ಸಂಕಥನದಿಂದ ಮುಕ್ತವಾದ ಅಥವ ಸಾಂಸ್ಥಿಕ ನಿಯಂತ್ರಣವಿಲ್ಲದ ಯೂವುದೇ ಜ್ಞಾನ, ಜ್ಞಾನಮಾರ್ಗ ಅಥವ ಗ್ರಹಿಕೆ ಇರಲು ಸಾಧ್ಯವಿಲ್ಲ."[1]

'ಚಿದಂಬರ ರಹಸ್ಯ' ಕೃತಿಯಲ್ಲಿ ಜಾತಿ ಪದ್ಧತಿಯನ್ನು ಉಳಿಸಿಕೊಳುವುದರ ಮೂಲಕ ಹಿಂದೂ ಧರ್ಮವನ್ನು ರಕ್ಷಿಸುವುದೇ ಆ ಸಮಯದಲ್ಲಿ ಅದರ ಘೋಷಿತ ಹಾಗೂ ಸೃಷ್ಟಿ ಉದ್ದೇಶವಾಗಿತ್ತು ಜನಾಂಗದ ಯಜಮಾನಶಕ್ತಿ ಧರ್ಮ, ನಿಜವಾದ ಧಾರ್ಮಿಕರು ಅಲ್ಲದ ಧರ್ಮವನ್ನು ನಂಬಿದವರು ಅಲ್ಲದೆ ಅದನ್ನು ನಿಯಂತ್ರಿಸುವವರು ಯಜಮಾನ ಕೇಂದ್ರಗಳು. ಈಗ ಇದೊಂದು ಮಾರುಕಟ್ಟೆಯಾಗಿದೆ 20ನೇ ಶತಮಾನಕ್ಕೆ ಬಂದಾಗ ಅವರ ವಿಚಾರಗಳು ಜಾತಿ ಶ್ರೇಣೀಕರಣದ ಕೋಮುವಾದಕ್ಕೆ ಬಂದಿರುತ್ತವೆ. ತಮ್ಮ ಜಾತಿ ವಿನಾಶ ಹೇಗೆ ಜಾತಿಯತೆ ಮತೀಯವಾದವಾಗಿ ಪರಿವರ್ತನೆಯಾಗುತ್ತಿದೆ, ಜಾತಿ ವಿನಾಶ ಪ್ರಜ್ಞೆ ತಲೆಯಲ್ಲಿ ಅವರ ಮತೀಯವಾದದ ಕಡೆಯಾಗುತ್ತದೆ. ಎಂಬುದರ ವಿಶ್ಲೇಷಣೆ ಇಲ್ಲಿದೆ. ಅದ್ದರಿಂದಲೇ ಕನ್ನಡ ಭೌತಿಕ ಪರಂಪರೆ

ಜಾತೀಯತೆಯನ್ನು ಎಷ್ಟು ನಿಷ್ಠುರವಾಗಿ ವಿರ್ಮಶೆ ಮಾಡಿದೆಯೋ ಅಷ್ಟೇ ನಿಷ್ಠುರವಾಗಿ ಮತೀಯತೆಯನ್ನು ವಿಮರ್ಶೆ ಮಾಡಿದೆ.

ಕೋಮುವಾದ ಭಾರತೀಯ 'ಮಹಾತ್ಮ 'ರನ್ನು ಬಲಿ ತೆಗೆದುಕೊಂಡಿದೆ. ಈ ಕೋಮುವಾದ ನಿಧಾನವಾಗಿ ಹಳ್ಳಿಗಳನ್ನು ಮುಂದುವರೆದು ಗ್ರಾಮಗಳ ಅವನತಿಯ ಬಗ್ಗೆಯೂ ತನ್ನ ಕೈ ತೋಳುಗಳನ್ನು ಚಾಚಿದೆ. ಹಾಗೂ ಅಲ್ಲಿನ ಭೀಕರ ವಾತಾವರಣ ರೋಗಗ್ರಸ್ಥವಾದ ಕೋಮುವಾದ ಸೇರಿಕೊಂಡು ಅದರ ಮೂಲಕ ಸಾಗುವ ಸಮಾಜ ಕೊನೆಗೆ ಅದರ ಅಂತ್ಯವನ್ನು ಕೊಳಕ್ಕಾಗಿ ಸಾಗಿಸುತ್ತದೆ. ಇದನ್ನೇ ವಸ್ತುವಾಗಿಟ್ಟುಕೊಂಡ ಪಿ. ಲಂಕೇಶ್‌ರ ಮುಸ್ಸಂಜೆ ಕಥಾ ಪ್ರಸಂಗದಲ್ಲಿ ಕೋಮುವಾದ ಹಳ್ಳಿಯಲ್ಲಿ ಸೇರಿ ಹೇಗೆ ಆ ಹಳ್ಳಿಯನ್ನು ಹೇಳ ಹೆಸರಿಲ್ಲದಂತೆ ನಿರ್ನಾಮ ಮಾಡಿ ಬಿಡುತ್ತದೆ ಎಂಬುದನ್ನು ಕಣ್ಣಿಗೆ ಕಟ್ಟಿಕೊಡುತ್ತದೆ. ಅದೇ ರೀತಿಯಾಗಿ ಚಿದಂಬರ ರಹಸ್ಯ ಕೃತಿಯಲ್ಲಿಯೂ ಮತೀಯವಾದ ಮತ್ತು ಕೋಮುವಾದದ ಕರಾಳ ಮುಖವಾಡಗಳು ಆ ಕೆಸರೂರನ್ನು ಅಗ್ನಿಗೆ ಆಹುತಿ ಮಾಡಿ ದಟ್ಟ ಹೊಗೆಯಲ್ಲಿ ಅಂತ್ಯ ಮಾಡುತ್ತದೆ ಎಂಬುದನ್ನು ಚಿತ್ರಿಸುತ್ತದೆ. ಆದರೆ ಕಾದಂಬರಿ ಹೀಗೆ ಒಂದು ಧ್ವನಿಗೆ ಮಾತ್ರ ಸೀಮಿತವಾಗಿರದೆ ಬಹು ಧ್ವನಿಗಳನ್ನು ಅರಗಿಸಿಕೊಂಡಿರುತ್ತದೆ. ಎಂಬುದು ಇಲ್ಲಿ ಮುಖ್ಯವಾದ ಅಂಶವಾಗಿದೆ. ಒಟ್ಟಿನಲ್ಲಿ ಸೃಷ್ಟಿಕ್ರಿಯೆಯಲ್ಲಿ ತೊಡಗಿದ ಕಾದಂಬರಿ ಪಾತ್ರಗಳನ್ನು, ಪರಿಸರವನ್ನು ಹಾಗೂ ಬಹು ಧ್ವನಿತ್ವಗಳನ್ನೂ ಸೃಷ್ಟಿಮಾಡಿದೆ. ಆದ್ದರಿಂದಲೇ ಕಾದಂಬರಿಯಲ್ಲಿ ಸೃಷ್ಟಿಯಾದ ಕೆಸರೂರು ಭಾರತೀಯ ಸಂಕೇತಿತ ಊರು. ಮತೀಯತೆ ಎಂಬುದು ಪ್ರತಿಮೆಯಾಗಿ ಕೆಲಸ ನಿರ್ವಹಿಸುತ್ತದೆ. ಹಾಗೂ ಮಳೆಗಾಲದಲ್ಲಿ ಕೆಸರೂರಾಗಿರುವ ನಡೆಯುವುದಕ್ಕೂ ಯೋಗ್ಯವಾಗಿರದೆ ಇರುವ ಚಲನಶೀಲತೆಯನ್ನು ಕಳೆದುಕೊಂಡ ಭದ್ರವಾಗಿ ನೆಲೆಯೂರಿರುವ ಕೆಸರೂರು ಕಾದಂಬರಿಯಲ್ಲಿ ರೂಪಕವಾಗಿ ಅರ್ಥೈಸುತ್ತದೆ. ಸಮಾಜಶಾಸ್ತ್ರೀಯ ಹಾಗೂ ಮನಶಾಸ್ತ್ರೀಯ ಸಂಕಥನದಿಂದ ನೋಡುವುದಕ್ಕಿಂತ ಚಿದಂಬರ ರಹಸ್ಯ ಕಾದಂಬರಿ ಭಿನ್ನವಾಗಿ ಅಲ್ಲಿನ ಸಮಾಜವನ್ನು ಗ್ರಹಿಸುತ್ತದೆ. ಹೊಸತಲೆಮಾರು – ಹಳೆತಲೆಮಾರಿನ ಸಂಘರ್ಷವನ್ನು ತನ್ನಗೆ ತಾನೇ ಜಾಗತಿಕವಾಗಿ ಹಳೆಯ ವಿಚಾರಗಳು ಹೊಸ ತಲೆಮಾರಿಗೆ ಬಂದು ಬಿಡುವುದನ್ನು ಕೃತಿ ಧ್ವನಿಸುತ್ತದೆ. ಏಕೆಂದರೆ ಕಾದಂಬರಿ ಪ್ರಾರಂಭಿಸಿದ ದ್ವನಿ "ಒಟ್ಟಿನಲ್ಲಿ ಕ್ರಾಂತಿ ಅಗಬೇಕಪ್ಪಾ"! ಕೊನೆಯ ಧ್ವನಿ ನಮಗೆ ಕಾಣ್ತದೆ! ಅವರಿಗೆ ಕಾಣ್ತದ? ಈ ಹೋಗೇಲಿ[2] ಎನ್ನುವ ವಿಚಾರ ಇಡೀ ಕಾದಂಬರಿಯನ್ನು ಆವರಿಸುತ್ತದೆ ಹಾಗೂ ಕ್ರಾಂತಿಯ ಮೂಲಕವೇ ಅಂತ್ಯಕ್ಕೆ ಚಲಿಸುತ್ತದೆ ಆದ್ದರಿಂದಲೇ ಕ್ರಾತಿಯಿಂದಲೇ ಪ್ರಾರಂಭವಾಗುವ ಕೃತಿ ಕೊನೆಯ ವರೆಗೂ ಅದನ್ನು ಉಳಿಸಿಕೊಂಡು ಬರುವ ತಂತ್ರವನ್ನು ಗ್ರಹಿಸಬಹುದಾಗಿದೆ ಹಾಗು ತೇಜಸ್ವಿ ಚಲಿಸಬೇಕಾದ ಹೊಸದಿಗಂತದ ಕಡೆಗೆ ಮುಖ ಮಾಡಿ ನಿಂತಿರುವುದು ಸ್ಪಷ್ಟವಾಗುತ್ತದೆ

ಕೃತಿಯ ಪ್ರಾರಂಭ ವಾಕ್ಯವಾದ "ಒಟ್ಟಿನಲ್ಲಿ ಕ್ರಾಂತಿ ಅಗಬೇಕಪ್ಪಾ"! ಎಂಬಲ್ಲಿ ಆಶ್ಚರ್ಯ ಸೂಚಕವನ್ನು ಬಳಸಿಕೊಂಡಿದೆ ಅಂದರೆ ಎಲೋ ಅನುಮಾನವು ಕಾಡುವ ಅದರಲ್ಲಿಯೂ ನವ್ಯಕಾಲದ ನಿರೂಪಕನ ಉದ್ದೇಶ ಸಂದೇಹ ಪಡುವುದೇ ಆಗಿದೆ ಅಂದರೆ ಯಾವುದನ್ನೂ ಸರಳವಾಗಿ ಒಪ್ಪಿಕೊಳ್ಳಲಾಗದೆ ಸಂದೇಹಿಸಿ ನಂತರ ಅದನ್ನು ಒಪ್ಪಿಕೊಳ್ಳುವ ಕಥಾ ನಿರೂಪಣೆಯನ್ನು ಕಾದಂಬರಿಯಲ್ಲಿ ನೋಡಬಹುದಾಗಿದೆ. ರಾಮ ಮಂದಿರ ಕಟ್ಟುವುದು ನಂಬಿಕೆಯನ್ನು ಆದರಿಸಿಕೊಂಡು ಅದು ಸಂಪೂರ್ಣ ನಂಬಿಕೆಯಾಗಿರುತ್ತದೆ ಆದರೆ ಅತಿಯಾದ ಪ್ರೀತಿ ದ್ವೇಷವಾಗುವ ಹಾಗೆ ಅತಿಯಾದ ಭಕ್ತಿ ಕುರುಡು ನಂಬಿಕೆಯಾಗುತ್ತದೆ.

ಮತೀಯವಾದ ಹಾಗು ಕೋಮುವಾದ ಎನ್ನುವುದು ಭಾರತದ ಸಂದರ್ಭದಲ್ಲಿ ಅನೇಕ ಶಕ್ತಿಗಳಾಗಿ ಬಂದು ಸೇರುತ್ತದೆ ಧರ್ಮವೆನ್ನುವುದು ವಿಶಾಲ ತ್ರಿಗುಣ ಕ್ರಮ ಒಂದು 'ಪಕ್ಷದ' ಸ್ವರೂಪ ಪಡೆದಿರುವುದನ್ನು ಕಾಣಬಹುದಾಗಿದೆ. ಹಾಗೂ ಪ್ರತ್ಯೇಕತವಾಗಿ ಗುರ್ತಿಸಿಕೊಳ್ಳುತ್ತದೆ. ಇದು ತೀವ್ರವಾದಂತೆ ಇದು ನನ್ನದು ಅದು ನಿನ್ನದು ನನ್ನದನ್ನು ನಾನು ರಕ್ಷಿಸುತ್ತೇನೆ. ನಿನ್ನದನ್ನು ನೀನು ರಕ್ಷಣೆ ಮಾಡು ಎಂಬುದನ್ನು ಹೇಳುತ್ತಿದೆ. ಏಕೆಂದರೆ ಪ್ರಜ್ಞೆಯಿಂದ ವಿನಾಶವಾದಾಗ ಜಾತ್ಯಾತೀತ – ಜಾತಿ ವಿಕಾರಗಳು ಪ್ರಧಾನವಾಗಿರುತ್ತದೆ. ಜಾತಿ ಲಕ್ಷಣ ಅನ್ಯ ಧರ್ಮಿಯರನ್ನು, ಜಾತಿಯರನ್ನು ನೋಡುವುದು ಅವರಾಗಿಯೇ ಅಥವ 'ಅನ್ಯ 'ರಾಗಿ ಹಾಗೂ ಅಸಹ್ಯ ಪಡುವುದು ಇದರಿಂದ ಜಾತಿ ಬುದ್ಧಿ ತೋರಿಸುವುದು ಹೀಗೆ ಒಂದು ಜಾತಿಯ ಸಂಕುಚಿತ ಬುದ್ಧಿ ಇರುವುದು ಇವನ್ನೆಲ್ಲ ಗುರ್ತಿಸುತ್ತದೆ ಜಾತಿ ಎಂಬುದು ಎಂಥ ವಿಭಾಗಿಕರಣದ ಬುದ್ಧಿ ಮನೋವಿಕಾರ ಎಂದರೆ ಒಳಗೆ 'ಅನ್ಯ' ವನ್ನು ಸೃಷ್ಟಿಸುತ್ತದೆ. ಭಾಷೆಯಲ್ಲಿ 'ಅವರು' ಮತ್ತು 'ನಾವು 'ಎಂಬುವುದನ್ನು ಸಂಕೇತಿಸುತ್ತದೆ. ಹಾಗೂ ಇದನ್ನು ನಿರಂತರವಾಗಿ ಬಳಸಿಕೊಳ್ಳುವುದಾಗಿರುತ್ತದೆ. ಇದರ ಮಿತಿಯ ಇನ್ನೊಂದು ಮುಖ್ಯ ಲಕ್ಷಣವೆಂದರೆ ಕಲ್ಪಿತ ಭೂತವನ್ನು ಸೃಷ್ಟಿಸುವುದು. ಇದೊಂದು ಜಾತಿ ವಿಕಾರಗಳ ಗ್ರಂಥಸ್ತವಾದ ಕಲ್ಪಿತ ಚರಿತ್ರೆ. ಇದು ಸುಳ್ಳು ಆದರೆ ಯಜಮಾನ್ಯ ಪ್ರತಿಪಾದನೆಯ ಮುಂದುವರಿಕೆಯ ಸಂಕಥನವಾಗಿದೆ. ಅಂದರೆ ಯಜಮಾನ್ಯದ ಪುನರ್ ಪ್ರತಿಪಾದನೆಯನ್ನು ಮಾಡುತ್ತದೆ ಪರಂಪರಾಗತವಾದ ನಿರಂತರವಾಗಿರುವುದನ್ನು ಯಜಮಾನಿಕೆಯ ವರ್ಗಗಳು ಮುಂದೂಡುವುದು ವ್ಯಕ್ತಿಗತವಾಗಿ ಮನುಷ್ಯ ತನ್ನ ಸ್ಥಳೀಯತೆಯ ಜೊತೆಗೆ ಬೆರೆತುಕೊಂಡು ಅಲ್ಲಿನ ಪೂರ್ವ ಗ್ರಹಿಕೆಗಳು ತನ್ನನು ತಾನು ತೆರೆದುಕೊಂಡಿರುತ್ತಾನೆ. ಆದರೆ ಈ ಯಜಮಾನೀ ಸಂಸ್ಥೆಯಲ್ಲಿ ವ್ಯಕ್ತಿಯ ಈ ಪೂರ್ವ ಗ್ರಹೀತಗಳೇ ಅವರಿಗೆ ಬಂಡವಾಳವಾಗಿರುತ್ತದೆ. ಏಕೆಂದರೆ ವ್ಯಕ್ತಿಗೆ ವೈಚಾರಿಕತೆ ತಿಳಿದಿರುವುದಿಲ್ಲ. ಆದ್ದರಿಂದಲೇ ಅವರಲ್ಲಿರುವ ಅವೈಜ್ಞಾನಿಕತೆಯನ್ನು

ಬಡೆದೆಬ್ಬಿಸಿ ಅದರ ಮೂಲಕ ತನ್ನ ಅಸ್ತಿತ್ವಕ್ಕೆ ಧಕ್ಕೆ ಬಾರದ ಹಾಗೆ ನೋಡಿಕೊಳ್ಳವುದು ಹಾಗೂ ಈ ಪೂರ್ವಗ್ರಹ ಪೀಡಿಕೆಗಳನ್ನು ಬೃಹದಾಕಾರವಾಗಿ ಬೆಳೆಸಿ ಧರ್ಮವನ್ನು ಕ್ಷುಲಕ ಮಾರುಕಟ್ಟೆಯ ಅಸ್ತ್ರವಾಗಿ ಯಜಮಾನೀ ರಾಜಕಾರಣವಾಗಿ ಬಳಸಿಕೊಳ್ಳಲಾಗಿದೆ. ಆದ್ದರಿಂದ ಸಮಾಜದ ಗ್ರಹಿಕೆಯನ್ನು ರೂಪಿಸಿದ ಲೋಹಿಯಾರವರ ವಾದವನ್ನು ಹಿಡಿದು ಕೃತಿ ಒಳಪ್ರವೇಶ ಮಾಡಲಾಗಿದೆ. ಏಕೆಂದರೆ 'ಚಿದಂಬರ ರಹಸ್ಯ' ಕಾದಂಬರಿ ಸಮಾಜದ ಕೇಂದ್ರಗಳಾದ ಜಾತಿ, ವರ್ಗ ಹಾಗೂ ಧರ್ಮ ಇವುಗಳನ್ನು ಅಭಿವ್ಯಕ್ತಿಸುವ ಕೃತಿ ಇವುಗಳ ಕರಾಳ ಚಿಂತನೆಯ ಮೂಲಕ ಆ ಪರಿಸರ ಹಾಗೂ ಸಮಾಜದ ವಿನಾಶವನ್ನು ಗುರ್ತಿಸುತ್ತದೆ.

ಲೋಹಿಯ ಚಿಂತನೆಗಳಲ್ಲಿ ಮುಖ್ಯವಾಗಿ ಸಮಾಜವನ್ನು ಕುರಿತ ಚಿಂತನೆಗಳು ಈ ರೀತಿಯಾಗಿವೆ.

---

- ✓ "ನಮಗಿಂತ ಬಲಶಾಲಿಯಾದವರನ್ನು ಕಂಡರೆ ಹೆದರುವುದು ಜಾಯಮಾನ ಇಂಥ ಮನುಷ್ಯ ಒಳ್ಳೆಯವನಾಗಲಾರ ಎನ್ನುವ ಮಾತನ್ನು ನೆನಪಿನಲ್ಲಿ ಇಟ್ಟು ಕೊಳ್ಳಬೇಕು. ತನಗಿಂತ ದೊಡ್ಡವರೊಂದಿಗೆ ಮಾತುಕತೆಗಾಗಿ ಕಾತುರತೆ ತೋರಿಸುವುದರಲ್ಲಿ ಧೃಡ ಮನಸ್ಸಿನ ಸ್ವಾಭಿಮಾನ ಪ್ರಕಟಿಸುವವನು ಒಳ್ಳೆಯ ಮನುಷ್ಯ."

- ✓ ನಾವು ಇತಿಹಾಸವನ್ನು ನೋಡುವ ದೃಷ್ಟಿಕೋನದ ಕ್ರಮ ಬದಲಾಗಬೇಕು ಇದು ತುಂಬ ಮುಖ್ಯವಾದುದು. ಹಿಂದೂಗಳು ಮತ್ತು ಮುಸಲ್ಮಾನರ ಬಗ್ಗೆ ಬಲವಾದ ಸಂದೇಹ, ಅಪನಂಬಿಕೆ ಇದೆ. ಸತ್ಯ ನುಡಿಯಲು ಮನುಷ್ಯ ಹಿಂಜರಿಯುತ್ತಾನೆ.

- ✓ ದೇಶ ಸರ್ವನಾಶವಾದರೂ ಪರವಾಗಿಲ್ಲ ತಮ್ಮ ಆಡಳಿತ ನಿರಂತರವಾಗಿ ಮುಂದುವರೆಯಬೇಕು. ಎನ್ನುವ ಒಪ್ಪಂದವಾಗಿ ಬಿಟ್ಟಿದೆ.

- ✓ ಹಿಂದುಗಳು ಮುಸಲ್ಮಾನರನ್ನು ಎಷ್ಟೆಷ್ಟು ಸಂದೇಹದಿಂದ ನೋಡುತ್ತಾರೋ ಮುಸಲ್ಮಾನರು ಅಷ್ಟೇ ಅಪಾಯಕಾರಿಯಾಗ ಬಲ್ಲರು ಹಿಂದುಗಳು ಅವರೊಂದಿಗೆ ಎಷ್ಟೆಷ್ಟು ಪ್ರೀತಿ ವಿಶ್ವಾಸದಿಂದ ವರ್ತಿಸುತ್ತಾರೋ ಅಷ್ಟರ ಮಟ್ಟಿಗೆ ಅವರು ಕಡಿಮೆ ಅಪಾಯಕಾರಿಯಾಗಬಲ್ಲರು

- ✓ ಮೈತ್ರಿ ಏರ್ಪಡುವುದಾದರೆ ಬಿಚ್ಚು ಮನಸ್ಸಿನ ಮೈತ್ರಿ ಏರ್ಪಡಬೇಕು. ಇಲ್ಲದಿದ್ದರೆ ಈ ವಿಚಾರ ಅಡೆತಡೆಗಳನ್ನೆದುರಿಸಿ ಕುಂಠಿತಗೊಳ್ಳುತ್ತದೆಂದು ನಾನು ಹೇಳಬೇಕಾಯಿತು.

- ✓ ಕ್ರಾಂತಿ ಹಾಗೂ ಸ್ತ್ರಿಯರನ್ನು ಕುರಿತ ಪ್ರತ್ಯೇಕತಾವಾದೀ ಮನೋಭಾವವೇ ಭಾರತೀಯ ಚೇತನದ ಈ ಅಧೋಗತಿಗೆ ಮೂಲಕಾರಣ ಎಂಬುದು ನನ್ನ ದೃಢ ನಂಬಿಕೆ ಸಾಹಸವನ್ನೂ ಆನಂದವನ್ನು ಸೃಷ್ಟಿಸುವ ಸಾಮರ್ಥ್ಯವನ್ನೇ ಕೊಲ್ಲಬಲ್ಲ ಶಕ್ತಿ ಈ ಪ್ರತ್ಯೇಕತವಾದಿ ಮನಸ್ಥಿತಿಗಿದೆ.

- ✓ ಭಾರತೀಯರು ಬದುಕಿಗೆ ಹೇಗೆ ಜೋತು ಬಿದ್ದಿದ್ದಾರೆ, ಅವರು ಕಡು ದುಃಖದ ಮಡುವಿನಲ್ಲೇ ನರಳಿ ಹೋಗೋ ಬದುಕು ನೂಕ ಬಯಸುವವರೇ ವಿನಃ ಏನಾದರೊಂದು ಮಹತ್ವದ ಪ್ರಯತ್ನ ಮಾಡುವ ಸಾಹಸಕ್ಕಿಳಿಯುವವರಲ್ಲ. ಆದರೆ ಹಣ ಹಾಗೂ ಅಧಿಕಾರ ಕುರಿತ ದುರಾಸೆಯಲ್ಲಿ ಮಾತ್ರ ಜಗತ್ತಿನ ಯಾವ ಜನಾಂಗವೂ ಅವರನ್ನು ಮೀರಿಸಲಾರದು.

- ✓ ಇಂದು ಭಾರತ ವಿಕೃತಗೊಂಡಿದೆ. ಕಾಮಕ್ಕೆ ಸಂಬಂಧಿಸಿದಂತೆ ಭಾರತೀಯರು ಎಷ್ಟೆಲ್ಲ ಪಾವಿತ್ರ್ಯದ ಮಾತಾಡಿದರೂ ಮದುವೆ ಹಾಗೂ ಕಾಮ ಕುರಿತ ವಿಚಾರಗಳಲ್ಲಿ ಮಾತ್ರ ಅವರು ಅತ್ಯಂತ ಕೊಳಕರಾಗಿಯೇ ಉಳಿದಿರುತ್ತಾರೆ.

- ✓ ಯಾರು ಎಲ್ಲಕ್ಕೂ ಕೆಳಗಿದ್ದಾರೋ ಅವರ ಮೇಲೆ ದೃಷ್ಟಿ ಹಾಯಿಸಿದರೆ ಅವರನ್ನು ಮೇಲೆತ್ತಿದರೆ, ನಿಜವಾದ ಅರ್ಥದಲ್ಲಿ ಅವರು ಮೇಲೇರೀದಂತಾಗುತ್ತದೆ.

- ✓ ಹುಡಿಗಿಯೊಬ್ಬಳು ತನ್ನ ಇಷ್ಟದಂತೆ ನಡೆದುಕೊಂಡರೆ, ಇಷ್ಟ ಬಂದವನ ಜೊತೆ ಹೋದರೆ, ಅಥವ ಅನೈತಿಕ ಸಂಬಂಧ ಹೊಂದಿದರೆ ಅದು ಗಂಡು ಹೆಣ್ಣಿನ ನಡುವಿನ ಸಹಜ ಸಂಬಂಧವನ್ನು ಸ್ಥಾಪಿಸುವ ಒಂದು ಬಗೆಯೇ ಹೊರೆತು ದೋಷವಿಲ್ಲ. ಆದರೆ ಸಮಾಜ ಕ್ರೂರವಾಗಿದೆ. ಸ್ತ್ರೀಯರಂತೂ ಇನ್ನಷ್ಟು ಕ್ರೂರಿಗಳಾಗಬಲ್ಲರು. ಪರ ಪುರುಷರೊಂದಿಗೆ ಓಡಾಡುವ ಹೆಣ್ಣು ಮಕ್ಕಳ ಬಗ್ಗೆ, ಅದರಲ್ಲೂ ಅವಿವಾಹಿತ ಹೆಣ್ಣು ಮಕ್ಕಳ ಬಗ್ಗೆ ವಿವಾಹಿತ ಸ್ತ್ರೀಯರು ಎಷ್ಟು ಕೆಟ್ಟದಾಗಿ ಮಾತನಾಡಿಕೊಳ್ಳುತ್ತಾರೆ. ಹಾಗೂ ಕ್ಷುದ್ರವಾಗಿ ವರ್ತಿಸುತ್ತಾರೆ. ಎಂಬುದನ್ನು ನೋಡಿದರೆ ದುಗುಡವಾಗುತ್ತದೆ. ಇಂಥ ಅನಾಗರಿಕ ಮನಸ್ಸುಗಳಿರುವವರೆಗೆ ಹೆಣ್ಣುಗಳ ನಡುವೆ ಭೇದಭಾವ ಮಾಡುವ ಪರಿಪಾಠ ಕೊನೆಗೊಳ್ಳಲಾರದು.

- ✓ ಲೈಂಗಿಕ ಮೌಲ್ಯಗಳನ್ನು ಕುರಿತು ಕ್ಷುದ್ರ ಸಂಗತಿಗಳ ವಿರುದ್ಧ ತರುಣ ತರುಣಿಯರು ಬಂಡೇಳಲು ಇದು ಸಕಾಲ. ಲೈಂಗಿಕ ನೀತಿ ಸಂಹಿತೆಯಲ್ಲಿ ಎರಡೇ ಎರಡು ಅಕ್ಷಮ್ಯ ಅಪರಾಧಗಳಿವೆ ಎಂಬುದು ಮಾತ್ರ ಅವರಿಗೆ ನೆನಪಿರಲಿ; ಒಂದು–ಅತ್ಯಾಚಾರ, ಎರಡು–ಸುಳ್ಳು ಹೇಳುವುದು, ಅಥವಾ ಕೊಟ್ಟ ಮಾತಿಗೆ ತಪ್ಪುವುದು. ಮೂರನೆಯ ಅಪರಾಧವೂ ಒಂದಿದೆ ಅದೆಂದರೆ, ಇನ್ನೊಬ್ಬರಿಗೆ ನೋವುಂಟು ಮಾಡುವುದು. ಈ ಕುರಿತು ಸಾಧ್ಯವಾದಷ್ಟೂ ಅವರು ಎಚ್ಚರವಹಿಸಬೇಕು.

- ✓ ತರುಣ ತರುಣಿಯರು ತಮ್ಮ ಪ್ರಾಮಾಣಿಕತೆಯ ಕಾರಣದಿಂದಾಗಿಯೇ ಅಪಖ್ಯಾತಿಗೊಳಗಾಗಬೇಕಾಗಿ ಬಂದ ಪಕ್ಷದಲ್ಲಿ ಒಂದು ಮಾತನ್ನು ನೆನಪಿನಲ್ಲಿಡಬೇಕು; ಕೆಸರುರಾಡಿಯನ್ನೆಲ್ಲ ತೆಗೆದು, ಮತ್ತೆ ನೀರು ಸರಾಗವಾಗಿ ಹರಿಯುವಂತೆ ಮಾಡಲು ಅವರು ಅನಿವಾರ್ಯವಾಗಿ ತೆರಬೇಕಾದ ಬೆಲೆ ಇದು. ಇದೇ 'ಚಿದಂಬರ ರಹಸ್ಯ' ಕೃತಿಯ ಸೂಕ್ಷ್ಮ ಒಳಧ್ವನಿಯಾಗಿರುತ್ತದೆ. ಹೀಗೆ ಜಾತಿ ಹಾಗೂ ಲಿಂಗಗಳನ್ನು ಕುರಿತಂತೆ ಇರುವ ಅಸಹ್ಯಕರವಾದ ಪ್ರತ್ಯೇಕತೆಗಳನ್ನು ನಿರ್ನಾಮಗೊಳಿಸುವುದಕ್ಕಿಂತ ಮಿಗಿಲಾದ ಉತ್ತಮ ಕೆಲಸ ಇವತ್ತು ಯಾವುದೂ ಇಲ್ಲ. ಈ ದಿಸೆಯಲ್ಲಿ ತೀರಾ ಒರಟಾಗಿರಬಾರದು ಹಾಗೂ ಇತರರಿಗೆ ನೋವುಂಟು ಮಾಡಬಾರದು ಎಂಬ ಮಾತು ಸದಾ ಇರಲಿ. ಕಾರಣ, ಗಂಡು ಹೆಣ್ಣುಗಳ ನಡುವಣ ಸಂಬಂಧದಲ್ಲಿ ಅತಿಸೂಕ್ಷ್ಮವಾದ ಎಳೆಗಳಿವೆ. ಆ ಬಗೆಯ ಎಚ್ಚರವನ್ನು ಸದಾ ಕಾಯ್ದುಕೊಳ್ಳುವುದು ಸಾಧ್ಯವಾಗದಿರಬಹುದು. ಆದರೆ ಪ್ರಯತ್ನ ಮಾತ್ರ ಎಂದೆಂದಿಗೂ ನಿಲ್ಲದಿರಲಿ, ಅದಕ್ಕಿಂತ ಮಿಗಿಲಾಗಿ ಈ ದಟ್ಟ ನಿರಾಶೆಯನ್ನು ಚದುರಿಸಿ, ಸಂತಸದ ಗಳಿಗೆಗಳನ್ನು ಸೃಷ್ಟಿಸುವ ಸಾಹಸಕ್ಕೆ ಎಲ್ಲರೂ ಧುಮುಕಲಿ ಎಮಬುದೇ ಲೋಹಿಯಾರವರ ಆಶಯ.

ಒಟ್ಟಿನಲ್ಲಿ ಪಾರಂಪರಿಕ ಆಲೋಚನೆಗಳಿಂದ ಬಂಧಿಸ್ಪಟ್ಟ ತರುಣ ತರುಣಿಯರ ಆಲೋಚನೆಗಳನ್ನು ಒಡೆದು ಅದನ್ನು ಮೀರಿ ನಿಲ್ಲುವ, ನಿಲ್ಲಬೇಕಾದ ಅವಶ್ಯಕತೆಗಳನ್ನು ಸಂರಚಿಸುವುದೆ ಕಾದಂಬರಿಯ ಸೂಕ್ಷ್ಮ ಧ್ವನಿಯಾಗಿ ಮೂಡುತ್ತದೆ. ಆದ್ದರಿಂದಲೇ ಒಂದು ಸಮಾಜ ರೂಪಿಸಿಕೊಂಡಿರುವ ಪಾರಂಪರಿಕ ಜಗತ್ತಿನ ಭೂತವನ್ನು ಹಾಗೂ ಅದರಿಂದ ಬಿಡಿಸಿಕೊಳ್ಳುವ ಪ್ರಯತ್ನ ವರ್ತಮಾನದಲ್ಲಿ ನಡೆದು ಮುಂದೆ ಹೊಸದಾಗಿ ತೆರೆದುಕೊಳ್ಳಬೇಕಾದ ಭವಿಷ್ಯವನ್ನು ರಫಿ–ಜಯಂತಿಯರ ಮೂಲಕ ಸಾಧಿಸುತ್ತಾರೆ ತೇಜಸ್ವಿ. ಹೀಗೆ ಪಾರಂಪರಿಕ ಲೋಕದ ಆಲೋಚನೆಗಳು ವ್ಯಗ್ರವಾಗಿ ಮುಂದಿನ ಪೀಳಿಗೆಯ ತರುಣ ತರುಣಿಯರ ಆಲೋಚನೆಗಳಿಗೆ ಬೆಲೆ ಕೊಡದೆ ಅವರನ್ನೇ ನಿಯಂತ್ರಿಸುವ

ಕ್ರಮದಲ್ಲಿ ಈ ಪಾರಂಪರಿಕ ಸಮಾಜ ನಿರ್ಮಾಣವಾಗಿದೆ. ಹೀಗೆ 'ಚಿದಂಬರ ರಹಸ್ಯ' ಕೃತಿಯಲ್ಲಿ ಪಾಟೀಲರ ವಿರುದ್ಧ ಮಾತನಾಡಿದ ಸಂದಭದಲ್ಲಿ ತರುಣನ ಮಾತಿಗೆ ಬೆಲೆ ನೀಡಿದ ತರುಣಿಗೆ ತನ್ನ ಸುತ್ತಲು ಕುಳಿತ ಮಹಿಳೆಯರು ಆಕೆಯನ್ನು ನಿಯಂತ್ರಿಸುವ ವಿಧಾನಗಳನ್ನು ಕಾಣಬಹುದಾಗಿದೆ. ಹೀಗಿರುವ ಸಂದರ್ಭದಲ್ಲಿ ಹೊಸದಾಗಿ ತೆರೆದುಕೊಂಡು ಈ ಸಮಾಜವನ್ನು ನಿರ್ಮಾಣ ಮಾಡಹೋಗುವ ತರುಣ ಪೀಳಿಗೆಗೆ ಬೆಲೆ ಕೊಡದೆ ಹೋದಾಗ ನಿಜವಾದ ಅರ್ಥದಲ್ಲಿ ಆ ಸಮಾಜದಲ್ಲಿ ಒಟ್ಟಿನಲ್ಲಿ ಕಾಂತ್ರಿಯಾಗಬೇಕಾಗಿದೆ.

ಹೀಗೆ ಲೋಹಿಯಾ ರೂಪಿಸಿದ ಚಿಂತನೆಗಳು ಹಾಗೂ ಆ ಚಿಂತನೆಗಳ ಮೂಲಕ ಗ್ರಹಿಸಿದ ಸಮಾಜದ ಚಲನೆಗಳನ್ನು ತೇಜಸ್ವಿಯವರ ಕಾದಂಬರಿಯಾದ 'ಚಿದಂಬರ ರಹಸ್ಯ ' ನಿರೂಪಿಸಿರುವ ಕ್ರಮದಲ್ಲಿ ತಿಳಿಯಲಾಗಿದೆ.

ತೇಜಸ್ವಿಯವರು ನಿರೂಪಿಸಿರುವ 'ವಿವರ್ಶೆಯ ವಿಮರ್ಶೆ' ಕೃತಿಯಲ್ಲಿ ಹೊಸ ದಿಗಂತದೆಡೆಗೆ ಹೋಗುವ ಆಲೋಚನೆಗಳಿಗೆ ಮುಖಮಾಡಿರುವ ಹಾಗೂ ಅದರ ಗ್ರಹಿಕೆಗಳನ್ನು ನೀಡಿರುವ ಬರವಣಿಗೆಯಲ್ಲಿ "ಲೋಹಿಯರವರ ಬರವಣಿಗೆಗಳು ನನ್ನ ಜೀವನ ವಿಧಾನವನ್ನೂ ಗ್ರಹಿಸುವ ಕ್ರಮವನ್ನು ಆಲೋಚನೆಯನ್ನು ಅಭಿವ್ಯಕ್ತಿ ವಿಧಾನವನ್ನು ಒಟ್ಟಿನಲ್ಲಿ ಇಡೀ ಸಮಗ್ರ ವ್ಯಕ್ತಿತ್ವವನ್ನು ಸಂಪೂರ್ಣ ಬದಲಿಸಿದ್ದು ಲೋಹಿಯರವರ ತತ್ವ ಚಿಂತನೆ."[5] ಎಂದು ಹೇಳಿಕೊಂಡಿರುತ್ತಾರೆ.

- ❖ ನಮ್ಮ ವಿದ್ಯಾಭ್ಯಾಸದ ತಿರುಳು, ವಿದ್ಯಾಭ್ಯಾಸದ ಕ್ರಮ, ಶಿಕ್ಷಣ ಮಾಧ್ಯಮ ಇವು ಭಾರತೀಯ ಪರಿಸ್ಥಿತಿಯಲ್ಲಿ ಎಂಥ ಅಸಂಬದ್ಧತೆಯ ಪರಮಾವಧಿಯಾಗಿದೆ. ಎಂಬುದು ನನಗೆ ಅರಿವಾಯ್ತು ಈ ನಿಗೂಢ ಅಪರಿಚಿತ ಭಾರತದ ಬಗ್ಗೆ ಕಣ್ಣು ತೆರೆಸಿದ್ದು ಲೋಹಿಯ. ಹೀಗೆ ಹೇಳಿಕೊಂಡ ತೇಜಸ್ವಿಯವರಿಗೆ ಮುಂದೆ ತಾವು ಬರೆದ ಸಾಹಿತ್ಯಕ್ಕೆ ಸ್ಪೂರ್ತಿಯಾದವರ ಬಗ್ಗೆ ಹೀಗೆ ವಿವರಿಸುತ್ತಾರೆ.[6]

- ❖ ಲೋಹಿಯರವರ ತತ್ವ ಚಿಂತನೆ, ಕುವೆಂಪುರವರ ಕಲಾ ಸೃಷ್ಠಿ, ಕಾರಂತರ ಜೀವನ ದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆ ಈ ಮೂರೇ ನನ್ನ ಈಚಿನ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿರುವುದು.7 ಎಂದು ಹೇಳಿಕೊಂಡ ಕಾದಂಬರಿಕಾರ

ತನ್ನ ಹಂಬಲವನ್ನು ಬರವಣಿಗೆಯಲ್ಲಿ ಹಾಗೂ ವಸ್ತುವನ್ನು ನೋಡುವ ಕ್ರಮದ ಅಭಿವ್ಯಕ್ತಿಯನ್ನು ಹೊಸತರದಲ್ಲಿ ಸಜ್ಜುಗೊಳಿಸಿದರು.

❖ " ನನ್ನ ಜೀವನ ಮತ್ತು ಅದರ ಅಂಗವಾದ ಸಾಹಿತ್ಯ ಸೃಷ್ಟಿ ಇವು ಇಂದಿನ ಭಾರತೀಯ ಸಂದರ್ಭದ ನಮ್ಮ ವ್ಯಕ್ತಿತ್ವದ ಅಸಂಬದ್ಧತೆಯ ವಿರುದ್ಧ ಹೋರಾಡುವ ಮತ್ತು ಹೊಸ ನಾಗರೀಕತೆಯೊಂದನ್ನು ನಿರ್ಮಿಸುವ ಆಂದೋಲನವೂ ಆದರೆ ಮಾತ್ರ ನಾವು ನವ್ಯರಿಂದ ಭಿನ್ನವೆಂದು ಭಾವಿಸಬಹುದು" ಎಂದು ಬರೆದಿದ್ದಾರೆ.

ಹೀಗೆ ಹೊಸದಾಗಿ ತೆರೆದುಕೊಂಡ ತೇಜಸ್ವಿಯವರು ಸಮಾಜದಲ್ಲಿರುವ ಜಾತೀಯತೆ ವರ್ಗ ಹಾಗೂ ಪಾರಂಪರಿಕವಾಗಿ ಒಂದು ಬದುಕಿನ ಕ್ರಮಕ್ಕೆ ಅನ್ಯರಾಗಿ ಭಿನ್ನವಾಗಿ ಕಾದಂಬರಿಯ ವಸ್ತುವನ್ನು ಹುಡುಕುತ್ತಾರೆ. ಇಂತಹ ಸಂದರ್ಭದಲ್ಲಿ ರೋಗಗ್ರಸ್ಥವಾದ ಸಮಾಜದಲ್ಲಿ ಇದ್ದು ಅವರಿಂದ ಬೇರೆಯಾಗಿ ಜಾತೀಯತೆಯನ್ನು ಲೆಕ್ಕಿಸದೆ ಸಂಪ್ರದಾಯ ಪರಂಪರೆ ಬಿಗಿದಿರುವ ಉಸಿರು ಗಟ್ಟಿರುವ ಬಂಧನದಿಂದ ಮುಕ್ತಗೊಳ್ಳುವಿಕೆಯಲ್ಲಿ ಆಯ್ಕೆ ಮಾಡುವ ಪರಿಸರವೆಂದರೆ ಜಾತಿಯ ನಿಯಮಗಳನ್ನು ಮೀರಿ ತನ್ನದೆ ಆದ ಸ್ವಾತಂತ್ರ್ಯದ ದಿಗಂತವನ್ನು ಹುಡಿಕಿಕೊಂಡು ಹೋಗಿ ರೋಗಗ್ರಸ್ಥ ಸಮಾಜವು ಇಲ್ಲದ ಮನುಷ್ಯನ ಮನೋವಿಕಾರವಿಲ್ಲದ ಎಲ್ಲವೂ ನಿರ್ಣಾಮವಾಗಿ ತಮ್ಮದೇ ಹೊಸ ಬದುಕಿಗೆ ತೆರೆದುಕೊಳ್ಳುವ ರಫಿ–ಜಯಂತಿಯರ ಪ್ರೇಮ ಪ್ರಯಾಣ ಹೊಸ ದಿಗಂತದ ಕಡೆಗೆ ಸಾಗಿದೆ. ಎನ್ನುವ ವಿಚಾರವಾಗಿದೆ. ಸಾಮಾಜಿಕವಾದ ವಾತಾವರಣದ ಮಧ್ಯದಲ್ಲಿಯೇ ಹುಟ್ಟಿ ಬೆಳೆಯುವ ಪ್ರೇಮವನ್ನು ವೈಯಕ್ತಿಕ ಸ್ವಾರ್ಥವಾಗಿಯೂ ಮಾರ್ಪಡಿಸಿಕೊಳ್ಳದೆ ತನ್ನ ಜೀವಿಕೆಯ ಉಳಿವಿಗಾಗಿ ಮಾತ್ರವೇ ಅವಲಂಬಿಸ ಬೇಕಾಗುವಂತಹದ್ದು. ಆದ್ದರಿಂದಲೇ ಕಾಲೇಜು ವಿದ್ಯಾರ್ಥಿ– ವಿದ್ಯಾರ್ಥಿನಿಯರ ನಡುವಿನ ಆಕರ್ಷಣೆಯಲ್ಲಿ ಕಾಮ–ಪ್ರೇಮದ ವಿಚಾರಗಳು ಕಾಣಿಸಿಕೊಳ್ಳುತ್ತದೆ. ಕೆಸರೂರಿನ ಕಾಲೇಜು ಹುಡುಗರು–ಹುಡಿಗಿಯರನ್ನು ಪ್ರೀತಿಸಿ, ಪ್ರೀತಿಸಿ ಲಾಚಾರ್ ಆಗಿ ಹೋಗಿದ್ದವರು. ಸೂಟುಹಾಕಿ, ಬೂಟುಹಾಕಿ, ಟೈ ಕಟ್ಟಿ, ಸಿಗರೇಟ್ ಎಳೆದು, ಸಿಳ್ಳೆ ಹೊಡೆದು, ಕೆಮ್ಮಿ ಅಡ್ಡಾಡಿ ನಮ ನಮೂನೆಯ ಪೋಸುಗಳಲ್ಲಿ ನಿಂತು ಏನೇನು ಮಾಡಿದರೂ ಒಬ್ಬ ಮನದನ್ನೆಯ ಮನದ ಮೇಲೂ ಪರಿಣಾಮ ಬೀರಲಾರದೆ ಕೊನೆಗೆ ಅವನ್ನೆಲ್ಲಾ ತೆಗೆದೆಸೆದು ಖಾದಿ ಜುಬ್ಬಾ ಪೈ ಜಾಮಕ್ಕೆ ಇಳಿದು ರಾಮಚಂದ್ರನ ಶಿಷ್ಯರಾದರು ಹೀಗೆ ಹುಡುಗರ ಪ್ರೀತಿಯನ್ನು ಅರ್ಥೈಸಿಕೊಳ್ಳದ ಹುಡಿಗಿಯರು ಅವರಿಗೊಂದು ಕುತೂಹಲದ ಆಗರವಾಗಿದ್ದರು.

ಹುಡುಗರ ಎದೆಯೊಳಗಿನ ಅದಮ್ಯ ಪ್ರೇಮ ಶರಧಿಯನ್ನೂ ತ್ಯಾಗಮಯತೆಯನ್ನೂ, ಸಾಹಸ ಪ್ರಿಯತೆಯನ್ನೂ ಅರಿಯುವ ಯೋಗ್ಯತೆ ಈ ಕೆಸರೂರಿನ ಹುಡುಗಿಯರಿಗೆ ಇಲ್ಲ. ಎನ್ನುವ ತೀರಾ ವಿಷಾದಕರ ನಿರ್ಣಯಕ್ಕೆ ಅವರು ಬಂದಿದ್ದರು. ಆದರೆ ಹುಡುಗರ ಅವ್ಯಕ್ತ ಪ್ರೇಮದ ಅಮೂಲ್ಯತೆಯನ್ನರಿಯದ ಆ ಹುಡಿಗಿಯರು ಕಸಿ ಕಸಿ ನಗುತ್ತಾ ಮರೆಯಲ್ಲಿ ನರಿಗಳಂತೆ ನಿಂತು ಏನನ್ನೋ ಪಿಸುಗುಟ್ಟುವ ಗೂಬೆ ಹುಡುಗರೊಡನೆ ಮಾತನಾಡುವುದನ್ನು ನೋಡಿದರೆ ಹೊಟ್ಟೆ ತೊಳಸಿ ಬರುತ್ತಿತ್ತು. ಹೀಗೆ ಒಬ್ಬರನ್ನು ಒಬ್ಬರು ಅರ್ಥೈಸಿಕೊಳ್ಳಲಾರದೆ ಅಂತರ್ಜಾತಿಯ ವಿವಾಹದಂತಹ ಕ್ರಾಂತಿ ಮಾಡಲು ಕೈ ಜೋಡಿಸದ ಹುಡುಗಿಯರು ಅವರಿಗೆ ಮರೀಚಿಕೆಯಾಗಿದ್ದರು. ಹಿಂದೊಮ್ಮೆ ಜಾತಿವಿನಾಶ ಕಾರ್ಯಕ್ರಮ ಹಾಕಿಕೊಂಡು ಅಂತರ್ಜಾತಿಯ ವಿವಾಹವಾಗಬೇಕು. ಜಾತಿಗಳನ್ನೂ ಕಂದಾಚಾರವನ್ನೂ ಮೂಢ ನಂಬಿಕೆಗಳನ್ನೂ ತಿರಸ್ಕರಿಸಬೇಕು. ಎಂದೆಲ್ಲಾ ತಿರ್ಮಾನ ತಗೊಂಡಾಗಲೂ ಅವರಿಗೆ ತಾತ್ಕಲಿಕವಾಗಿಯಾದರು ನೆಮ್ಮದಿಯಾಗಿತ್ತು. ಆದರೆ ಈ ತೀರ್ಮಾನ ತೆಗೆದುಕೊಂಡ ಆ ಯುವ ಸಮುದಾಯದಲ್ಲಿ ಯಾವ ಯುವತಿಯೂ ಇರಲಿಲ್ಲ.

ಹೀಗೆ ಹುಡುಗರ ಮಾನಸಿಕ ತೊಳಲಾಟದ ಸಂರಚನೆಯಲ್ಲಿ ಯಾವುದಾದರೂ ಸಮಾಜದ ಬದಲಾವಣೆಗೆ ಹೆಚ್ಚಾಗಿ ತರುಣ ಪೀಳಿಗೆಯನ್ನು ಬಳಸಿಕೊಂಡ ಕ್ರಮ ಅರಿವಿಗೆ ಬರುತ್ತದೆ. ಏಕೆಂದರೆ ಸಮಾಜದ ರಚನೆಯಲ್ಲಿ ಹಿರಿಯರು ತಮ್ಮವರ ನಂಬಿಕೆಗಳನ್ನು ನಂಬಿಕೊಂಡು ಒಪ್ಪಿಕೊಂಡು ಬಂದು ಬಿಟ್ಟಿರುತ್ತಾರೆ. ತುಂಬಾ ಕಿರಿಯರಾದರೆ ತಿಳುವಳಿಕೆ ಹಂಬಲ ಕೊರತೆ ಇರುತ್ತದೆ. ಆದ್ದರಿಂದ ಕಬ್ಬಿಣ ಕಾದಾಗಲೇ ಹೊಡೆದು ಬಿಡಬೇಕು. ಎಂಬ ಸೂತ್ರ ಅಥವ ತಂತ್ರಕ್ಕೆ ಒಳಗಾದ ತೇಜಸ್ವಿಯವರು ತರುಣ ಪೀಳಿಗೆಯಿಂದಲೇ ಒಂದು ಸಮಾಜದ ಬದಲಾವಣೆ ಸಾಧ್ಯವೆಂದು ತಿಳಿದವರು ಜಾತೀ ವಿನಾಶಕ್ಕೆ ಒಂದು ಸಾಧನವಾಗಿಯೇ ಪ್ರೇಮವನ್ನು ನೋಡುತ್ತಾರೆ. ಗಂಡು – ಹೆಣ್ಣಿನ ನಡುವಿನ ಪ್ರೇಮವು ಸಾಮಾಜಿಕತೆಯ ಆವರಣದೊಳಗೆ ಕಂಡು ಕೊಳ್ಳುವ ಸ್ವರೂಪವೇ ಅವರಿಗೆ ಮುಖ್ಯವಾಗುತ್ತದೆ. ಅದಕ್ಕೆ ತಕ್ಕಂತೆ ಮನುಷ್ಯನ ಮೂಲಭೂತ ಪ್ರವೃತಿಯ ಎಚ್ಚರವೂ ಜಾತಿ, ಪರಂಪರೆಯ ಕಟ್ಟಿನಿಂದಾಚೆಗೆ ಬೆಳೆಯುವುದು ಮುಖ್ಯವಾದಾಗ ಮನುಷ್ಯ ತನ್ನ ಭಾವನೆಗಳ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುತ್ತಾನೆ. ಎಂಬ ಧೋರಣೆ ಕಾಣಿಸುತ್ತದೆ. ಇಲ್ಲಿ ಪ್ರೇಮಿಸುವುದು ಜಾತಿ ಬಿಡುಗಡೆಗಿಂತ ಜೀವಂತಿಕೆಗಾಗಿ, ಪ್ರೀತಿಸುವ ಜೀವಂತಿಕೆಯನ್ನು ರಾಜಕಾರಣದಲ್ಲಿ ಆರ್ಥಿಕತೆಯ ಗುಂಗಿನಲ್ಲಿ ಕಳೆದು ಕೊಳ್ಳುತ್ತಿರುವವರಿಗೆ ಸುತ್ತಲಿನ ಸಮಾಜವೊಂದು ಕರಾಳತೆಯ ಭೀತಿಯ ಸ್ವರೂಪದ್ದಾಗಿದೆ.

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಸಾಮಾನ್ಯನ ಜೀವನಕ್ರಮದ ಹಿಂದಿರುವ ಶಕ್ತಿಗಳ ವಸ್ತುನಿಷ್ಠ ಗ್ರಹಿಕೆಗಳನ್ನು ಕಾದಂಬರಿಗಳ ಆಶಯವಾಗಿ ಕಂಡುಕೊಳ್ಳುತ್ತಾರೆ. ಈ ಕಾದಂಬರಿಯಲ್ಲಿ ಸುಧಾರಣೆಗಿಂತ ಬದಲಾವಣೆಗಳಲ್ಲಿಯೇ ತೇಜಸ್ವಿಯವರಿಗೆ ನಂಬಿಕೆ, ವಿಶ್ವಾಸ ಮತ್ತು ಶ್ರದ್ಧೆ ಪ್ರಧಾನವಾಗಿ ಜೀವನಮುಖಿಯಾದ ಹೊಸ ಸಾಹಿತ್ಯವನ್ನು ರೂಪಿಸುವುದರ ಕಡೆಗೆ ಸಾಗಿರುವುದನ್ನು ಸ್ಪಷ್ಟವಾಗಿ ಗುರ್ತಿಸಬಹುದಾಗಿದೆ. ಮನುಷ್ಯರ ತಾತ್ವಿಕ ಅನನ್ಯತೆಯ ಪ್ರತೀಕವಾಗಿ ನೋಡುವ ಮನೋಧರ್ಮ ಮೂಲಭಿತ್ತಿಯಾಗಿದೆ. ಏಕೆಂದರೆ ಬದಲಾವಣೆಯೇ ಮನುಷ್ಯ ಹಾಗೂ ಸಂಸ್ಕೃತಿಗಳು 'ಆಗುವ ' 'ರೂಪುಗೊಳ್ಳುವ ' ಪ್ರಕ್ರಿಯೆಯೆಂದು, ಹಾಗೂ ಬದಲಾವಣೆ ಎನ್ನುವುದು ಚೈತನ್ಯ ತರುವ ಬೆಳವಣಿಗೆಯ ಹಾದಿ ಮಾಡಿಕೊಡಬಲ್ಲದೆಂದು ಈ ಕೃತಿ ಪ್ರತಿ ಪಾದಿಸುತ್ತದೆ.

ತೇಜಸ್ವಿಯವರ ದೃಷ್ಟಿಯಲ್ಲಿ – " ಜೀವನದಲ್ಲಿ ಕಾಮ ಮತ್ತು ಮೃತ್ಯು ಎರಡು ವಿರುದ್ಧ ಶಕ್ತಿಗಳು. ಅನೇಕರಿಗೆ ಮೃತ್ಯು ಜೀವನವನ್ನು ಅರ್ಥಪೂರ್ಣ ಮಾಡುತ್ತದೆ. ಆದರೆ ನನಗೆ ಇಲ್ಲ. ಸಾಯುವುದು ಎಂದರೆ ಸೃಷ್ಟಿಸುವುದು. ಸಾವನ್ನು ಅರಿಯುವುದಕ್ಕೆ ಒಂದೇ ಮಾರ್ಗವೆಂದರೆ ಬದುಕು ಸೃಷ್ಟಿ ಮತ್ತು ಸಾವು ಇವೆರಡೂ ಬೇರ್ಪಡಿಸಬಲ್ಲ ಸ್ಥಿತಿಗಳು."

ಪ್ರೇಮ, ಕಾಮದ ಬಗ್ಗೆ ತೇಜಸ್ವಿಯವರು ಇಟ್ಟು ಕೊಂಡಿರುವ ತತ್ವವೆಂದರೆ "ಪ್ರೇಮವೆನ್ನುವುದು ಒಂದು ಏಕ ಘಟಕ, ಸೃಷ್ಟಿ ಸ್ಥಿತಿ ಮೂಲವಾದ ಏಕಶಕ್ತಿ ಅನ್ನುವ ಅರ್ಥದಲ್ಲಿ ನಾನು ಬಳಸಿದ್ದೇನೆ" ಎಂದಿದ್ದಾರೆ ಹಾಗೆಯೇ "ವ್ಯಕ್ತಿ ವಿಶಿಷ್ಟವಾದ ನಾಸ್ತಿಕ ,ಆಸ್ತಿಕವಾದ ಇತ್ಯಾದಿ ಎಲ್ಲಾ ವಾದಕ್ಕಿಂತ ಮೂಲಭೂತವಾದದೂ ಯಾವೊಂದು ನಿರ್ಣಯಕ್ಕೂ ವ್ಯಕ್ತಿಯೇ ಮಾಡುವಂಥದ್ದೂ ಆಗಿದೆ. ಪರಿಸರ ಮತ್ತು ವ್ಯಕ್ತಿತ್ವಗಳ ಘರ್ಷಣೆ ಯಾವ ಜೀವನದಲ್ಲಿ ಸಂವೇದನೆಯನ್ನು ಮಾತ್ರ ಸ್ವಂತವೂ ಆಗಿ ಉಳಿಸಿಕೊಂಡು ಹೋಗುವುದೇ ಇದರ ಮೂಲ ಕರ್ತವ್ಯ" ಎನ್ನುತ್ತಾರೆ. ಪ್ರೇಮ, ವಿವಾಹ, ಸ್ವಾತಂತ್ರ್ಯ, ಕಾಮ, ಸಾಹಿತ್ಯ, ಸೃಷ್ಟಿ, ಮೃತ್ಯು, ಧರ್ಮ, ದರ್ಶನ, ಸಮಾಜ, ವ್ಯಕ್ತಿ, ಪರಿಸರ, ತತ್ವ, ಪ್ರಜಾಪ್ರಭುತ್ವ, ವಿಧಿಕಾಂಡ, ಜೀವ, ಪುರುಷಾರ್ಥ, ಮುಂತಾದವುಗಳ ಬಗ್ಗೆ ತೇಜಸ್ವಿಯವರ ಪರಿಕಲ್ಪನೆಗಳು ಅದರದೇ ಆದ 'ವ್ಯಕ್ತಿ ವಿಶಿಷ್ಟವಾದ ಸಿದ್ಧಾಂತ'ಗಳಾಗಿವೆ.

**ಆಧುನಿಕತೆ ಹಾಗೂ ಪರಿಸರ** ; ಆಧುನಿಕತೆಯ ಒಳ ಪ್ರವೇಶದಿಂದ ಹೊಸ ಜೀವನ ವಿಧಾನದ ಪರಿಚಯಸಿಕೊಂಡ ಸಂಸ್ಕೃತಿ ಅನ್ಯ ಸಂಸ್ಕೃತಿಯೊಡನೆ ತನ್ನನು ಇಟ್ಟು ನೋಡಿಕೊಂಡ ಕ್ರಮದಿಂದ ವಿಸ್ತರಿಸಿದೆ. ಆದರೆ ಮನುಷ್ಯ ತನ್ನ ಸಂಸ್ಕೃತಿಯೊಳಗೆ ಇರುವ ತನ್ನ ಜೀವನ ವಿಧಾನದಲ್ಲಿಯೆ ಪ್ರಜ್ಞೆ

ತನ್ನ ಸೂಕ್ಷ್ಮತೆಯನ್ನು ವಿಸ್ತರಿಸಿಕೊಂಡಾಗಲೂ ಅದನ್ನು 'ಆಧುನಿಕತೆ' ಯೆಂದು ಗುರ್ತಿಸಲಾಗಿತ್ತದೆ. ಈ ಆಧುನಿಕತೆಗೆ ಹೊರಗಿನ ಕಾರಣಗಳು ಪ್ರಭಾವಗಳು ಬೇಕಾಗಿಲ್ಲ ಬದಲಿಗೆ ಆಧುನಿಕತೆಯಲ್ಲಿ ಅಂದರೆ ಹೊಸ ಪ್ರಜ್ಞೆಯ ಸೂಕ್ಷ್ಮತೆಗಳಲ್ಲಿ ಗುರ್ತಿಸಿಕೊಂಡ ವ್ಯಕ್ತಿ ಸಂಪ್ರದಾಯ ಪ್ರಭಾವಕ್ಕೆ ಒಳಗಾಗಿಯೂ ಹೊರಗೆ ನಿಂತವನು, ತನ್ನಲ್ಲಿಯೇ ಗುರ್ತಿಸಿಕೊಂಡ ಸೂಕ್ಷ್ಮ ತರದ ಆಧುನಿಕತೆ ಹಾಗೂ ಅನ್ಯ ಸಂಸ್ಕೃತಿಯಿಂದ ಪಡೆದುಕೊಂಡ ಆಧುನಿಕತೆ ಒಂದು ಸಮಾಜದ ಬೆಳವಣಿಗೆಯ ಹಂತದಲ್ಲಿ ಯಾವುದು ಯಾವುದರಿಂದ ಪ್ರಚೋದಿತವಾಗಿದೆ, ಪ್ರಭಾವ ಹೊಂದಿದೆ ಎಂಬುವುದನ್ನು ಹೇಳಲು ಅಸಾಧ್ಯವಾಗಿರುವುದಂತಹದ್ದು. ತನ್ನ ಪರಿಸರದಲ್ಲಿ ಆಗುವ ಬದಲಾವಣೆಗಳು ವ್ಯಕ್ತಿಯ ಆಲೋಚನೆ ಈಗಾಗಲೇ ಬದಲಾಗಿರುವುದನ್ನು ಸ್ಥಾಪಿಸುತ್ತಿರುವಂತಹದ್ದು. ಆದರೆ ಈ ಬದಲಾವಣೆ ಎಂಬುದು ಕಣ್ಣಿಗೆ ಅಥವ ಭೌತಿಕವಾಗಿ ಕಾಣುವುದಕ್ಕಿಂತ ಮಾನಸಿಕವಾಗಿ ಗುರ್ತಿಸಿಕೊಂಡ ಕ್ರಮ ಮುಖ್ಯವಾಗಿದೆ. ಒಂದು ಸಮಾಜದ ಸಂಸ್ಕೃತಿಯಲ್ಲಿ ಜನರ ಜೀವನ ಕ್ರಮದಲ್ಲಿ ಮೂರ್ತ – ಅಮೂರ್ತವಾದ ಆಲೋಚನೆಗಳ ಹಿಡಿತವನ್ನು ಹಿಡಿದಿರುವ ಚಿಂತನೆಗಳ ಒಂದು ನೆಲೆ. ಕಾಲ ಕ್ರಮೇಣ ಬುದ್ದಿ ಜೀವಿಗಳ ಮನಸ್ಸು ಆ ಸಂಸ್ಕೃತಿಯಲ್ಲಿ ಭಿನ್ನ ದಾರಿಗಳನ್ನು ಹಿಡಿದಾಗ ನಿಧಾನವಾಗಿ ಅಲ್ಲಿನ ಜನರ ಬದುಕಿನ ಕ್ರಮದಲ್ಲಿ ಗೋಚರಿಸುತ್ತದೆ. ಇಂತಹ ದಾರಿಗಳು ಇದುವರೆಗಿನ ಬದುಕಿನ ಕ್ರಮದಲ್ಲಿ ಸದ್ಯದ ಅವಶ್ಯಕತೆಗಳಿಗೆ ತಕ್ಕಂತೆ ರೂಪಿಸುತ್ತಿರುವ ಭವಿಷ್ಯದ ಕಾಣ್ಕೆಯನ್ನು ಒಳಗೊಂಡಿರುತ್ತದೆ. ಹಾಗೆಯೇ ಈ ದೃಷ್ಟಿಕೋನ ವೈಯಕ್ತಿಕವಾಗಿ ಕಂಡುಕೊಳ್ಳುತ್ತಿರುವಂತೆಯೆ ಒಂದು ಸಮಾಜದ ಬದುಕನ್ನೂ ಒಳಗೊಂಡಿರುತ್ತದೆ.

ಒಟ್ಟಿನಲ್ಲಿ ಆಧುನಿಕತೆಯ ಮೂಲಕ ಗುರ್ತಿಸಿಕೊಂಡ ಬುದ್ದಿಜೀವಿಗಳು ವರ್ತಮಾನದಲ್ಲಿ ಎಂತಹ ಹೊಸ ಬದುಕಿನ ಪಥವನ್ನು ಹಿಡಿಯುತ್ತಾರೆ ಅಥವ ಅವರ ಪ್ರಜ್ಞೆ ಎಂತಹ ಬದುಕಿನ ಹಂಬಲವನ್ನು ಹುಡುಕುತ್ತದೆ, ರೂಪಿಸುತ್ತದೆ. ಎಂಬುದು ಸಮಾಜ ಯಾವ ದಿಕ್ಕಿನ ಕಡೆಗೆ ಈ ಸೃಜನಶೀಲರ ಪ್ರಜ್ಞೆ ಚಲಿಸುತ್ತದೆ ಎಂಬುದನ್ನು ಕೃತಿ ಗುರುತಿಸುತ್ತಿರುತ್ತದೆ. ಆದರೆ ಈ ಆಧುನಿಕತೆಯೆಂಬುದು ನಿಜವಾದ ಅರ್ಥದಲ್ಲಿ ಹೊಸಬದುಕಿನ ಆಧುನಿಕತೆಯೋ ಅಥವ ಮುಖವಾಡ ಹೊತ್ತುಕೊಂಡು ಬಂದ ಆಧುನಿಕತೆಯೋ ಎಂಬುದನ್ನು ಹೇಳುತ್ತಿರುತ್ತದೆ.

ತೇಜಸ್ವಿಯವರು ಕೂಡ ಪರಂಪರೆಯ ಆರಾಧಕರಿಗಿಂತ ಭಿನ್ನವಾಗಿ, ಆಧುನಿಕ ಅಭಿವೃದ್ಧಿ ಪಂಥಗಳು ಹಾಗೂ ಆಧುನಿಕ ಸಂಸ್ಥೆಗಳ ಆಗಮನದಿಂದಾಗಿ ನೆಲೆ ಕಳೆದುಕೊಳ್ಳುವ ವರ್ಗಗಳೂ ಇರುತ್ತವೆ. ಮೂಲತಃ ಆಧುನಿಕತಾವಾದೀ ಸಂವೇದನೆ ರೂಪಿಸುವ ಕಥಾ ಜಗತ್ತು ಒತ್ತು ಕೊಡುವ ಆಧುನಿಕತೆಯ ಹಿಂಸೆ ಈ ವರ್ಗಗಳನ್ನು ಕುರಿತದ್ದು.

ಡಾ. ನಟರಾಜ್ ಹುಳಿಯಾರ್ ರವರು ತಮ್ಮ ಮಹಾ ಪ್ರಬಂಧದಲ್ಲಿ ಗುರ್ತಿಸಿರುವಂತೆ 'ಚಿದಂಬರ ರಹಸ್ಯ' ಕೃತಿಯಲ್ಲಿ ದಾಖಲೆಯಾಗಿರುವ ಕೆಸರೂರಿನ ಅವನತಿಗೆ ಕಾರಣವಾಗಿರುವ ಮುಖ್ಯ ಶಕ್ತಿಗಳಲ್ಲಿ ಈ ಬೆಳವಣಿಗೆಯೂ ಒಂದು. ಯಂಕ್ಟನನ್ನು ನೆಲೆ ರಹಿತನನ್ನಾಗಿಸಿದ ಕಾನೂನಿನ ಇನ್ನೊಂದು ಮುಖವೇ ಮಾರುಕಟ್ಟೆ ಹಾಗೂ ಕಾಡುಗಳ ಸಂಬಂಧದ ಹೊಸ ಯುಗವನ್ನೂ ಆರಂಭಿಸಿತ್ತು. ಅದರ ಫಲವೇ ಸುಲೇಮಾನ್ ಬ್ಯಾರಿಯಂಥವರ ಆಗಮನ ಕಾಡು ಹಾಗೂ ಮಾರುಕಟ್ಟೆಗಳ ನಡುವೆ ಆರಂಭಗೊಂಡ ಈ ಸಂಬಂಧ ಕಾಡನ್ನು ನಂಬಿದ್ದ ಬುಡಕಟ್ಟುಗಳನ್ನು ನಿರ್ನಾಮ ಮಾಡಿತು . ಕಾಡಿನಲ್ಲಿ ಇದ್ದ ಅವರ ಜೀವನಾಧಾರಗಳು ಮಾರುಕಟ್ಟೆ ಪಾಲಾದವು. ಆದರೆ ಅದೇ ವೇಳೆಗೆ ಮಾರುಕಟ್ಟೆಯಿಂದ ಆಹಾರ ತರುವ ಶಕ್ತಿಯೂ ಅವರಗಿಲ್ಲವಾಯಿತು. ಆಧುನೀಕರಣದಿಂದಾಗಿ ತನ್ನ ನೆಲೆ ಕಳೆದುಕೊಳ್ಳುವ ಯಂಕ್ಟ ಫಾರೆಸ್ಟ್ ಆಫೀಸರುಗಳನ್ನು 'ಕುಸೀಲಿಡಲು' ತನ್ನ ಹೆಂಡತಿಯನ್ನೇ ಕಳುಹಿಸಬೇಕಾದ ಸ್ಥಿತಿ ತಲುಪಿದರೆ ಯಂಕ್ಟನಂತೆ ನೆಲೆ ಕಳೆದುಕೊಂಡ ಇನ್ನೊಂದು ವರ್ಗವಾದ ಗೋಸಾಯಿಗಳು ಪರಿಸರ ನಾಶಕ್ಕೇ ಕಾರಣರಾಗುತ್ತಾರೆ. ಕೆಸರೂರಿನ ಅರಣ್ಯ ನಾಶದ ಜೊತೆಗೆ ಮೃಗ ಪಕ್ಷಿಗಳನ್ನು ರಫ್ತು ಮಾಡುವವರೆಗೂ ಅವರ ಜಾಲ ಹಬ್ಬುತ್ತದೆ. ಕಚ್ಚೆ ಹರುಕರಿಗೆ ಹಿಡಿಸಬಹುದಾದ ಖಾಯಿಲೆಗಳನ್ನೆಲ್ಲಾ ಹಿಡಿಸುವ ಅವರು ಕೆಸರೂರಿನ ಹರಿಜನ ಹುಡುಗಿಯರನ್ನು ಪೇಟೆಗಳ ಸೂಳೆಗೇರಿಗೆ ಒಯ್ದು ಮಾರಾಟ ಮಾಡುವ ದಂಧೆಯನ್ನು ಆರಂಭಿಸುತ್ತಾರೆ ಆಧುನೀಕರಣದಲ್ಲಿ ಸಮಾಜದ ಅಂಚಿಗೆ ತಳ್ಳಲ್ಪಟ್ಟ ಜನಾಂಗದ ದುರಂತ ಸರಣಿಯನ್ನು ಗೋಸಾಯಿಗಳ ನೆಲೆಗೆಟ್ಟ ಬದುಕು ಸೂಚಿಸುತ್ತದೆ.[9]

ಆಧುನಿಕತೆಯ ಕರಿ ನೆರಳ ಹಿನ್ನಲೆಯಲ್ಲಿಯೇ ಜೋಗಿಹಾಳರ ಸಾವಿನ ಸುತ್ತ ಎದ್ದಿರುವ ಹಲವು ಅನುಮಾನ, ಸಂಶಯದ ಹುತ್ತ ಹಲವಾರು ಜನ ಹಲವಾರು ರೀತಿಯಲ್ಲಿ ಮಾತನಾಡಿಕೊಳ್ಳುತ್ತಾರೆ. "ಲ್ಯಾಬಿನಲ್ಲಿ ಸತ್ತ ಜೋಗಿಹಾಳರು ಹೃದಯಾಘಾತವೋ ಅಪಘಾತವೋ ಏನೊಂದು ಸರಿಯಾಗಿ ಗೊತ್ತಾಗಲಿಲ್ಲ. ಕೆಲವರು ಸ್ಲೈಡ್ ಪ್ರೊಜೆಕ್ಟರು ಏನೋ ಆಗಿತ್ತು. ಅನ್ನುತ್ತಾರೆ." ಹೀಗೆ ಎದ್ದಿರುವ ಅನುಮಾನಗಳು ಆ ಸಮಾಜದಲ್ಲಿ ಇನ್ನೂ ಬಗೆ ಹರಿಯದ ನಿಗೂಢತರವಾದ ಸಮಸ್ಯೆಯಾಗಿದೆ. ಆದರೆ ಮತ್ತೆ ಕೆಲವರು "ಡಿ ಡಿ ಟಿ ಬಾಂಬ್ ಅಂದರೆ ಸಿಡಿ ಮದ್ದಿನ ಸುತ್ತ ಡಿ ಡಿ ಟಿ ಇಟ್ಟು ಅದನ್ನು ತೋಟದೊಳಗಡೆ ಸಿಡಿಸೋದು, ಔಷದ ಸಿಂಪಡಿಸುವ ವಿಧಾನಕ್ಕಿಂತ ಇದು ಸುಲಭವೆ? ಅಂತ ಪ್ರಯೋಗ ಮಾಡ್ತಿದ್ವಿ ಆದರೆ ಇದು ಹೇಗೆ ಜೋಗಿಹಾಳರ ಸಾವಿಗೆ ಕಾರಣ ಅಂತ ಎಲ್ಲ ತಿಳಿದರೋ ಗೊತ್ತಿಲ್ಲ! ಈ ಡಿಡಿಟಿ ಬಾಂಬ್ ಪ್ರಾಜೆಕ್ಟಿಗೂ ಜೋಗಿಹಾಳರ ಸಾವಿಗೂ ಯಾವ ವಿಧವಾದ ಸಂಬಂಧವೂ ನನಗೆ ತೋಚುತ್ತಿಲ್ಲ" ಹೀಗೆ ಗುರಿ ಇಲ್ಲದನುಮಾನಗಳು ಸಾವಿಗೆ ಕಾರಣ ಹುಡುಕುತ್ತಿದೆಯೇ ಹೊರೆತು ಸಂಪೂರ್ಣವಾಗಿ ಅರ್ಥೈಸುವಿಕೆಯ ಅರ್ಥಸಿಗುವಿಕೆಯೇ ಇಲ್ಲದ

ಗುಮಾನಿಗಳು ಆ ವಿಜ್ಞಾನಿಯ ಸಾವಿನ ನಡುವೆ ಸುಳಿದಿರುವುದು ಹಲವಾರು ಕುತಂತ್ರದ ಕೈಗಳು ಇಲ್ಲಿ ಕೆಲಸ ನಿರ್ವಹಿಸಿರುವುದನ್ನು ಗುರ್ತಿಸಬಹುದಾಗಿದೆ. ಜಾತಿಯತೆ, ಭ್ರಷ್ಟಚಾರ ದ ವಿರುದ್ಧ ಧ್ವನಿ ಎತ್ತಿರುವ "ಒಟ್ಟಿನಲ್ಲಿ ಕ್ರಾಂತಿ ಆಗಬೇಕಪ್ಪ"! ಎನ್ನುವುದು ಇವರ ಸಾವಿನ ಸುಳಿವನ್ನು ಹುಡುಕುವಿಕೆಯಲ್ಲೂ ಆಗಬೇಕಾಗಿದೆ. ಏಕೆಂದರೆ ಮೇಧಾವಿಯಾದ ಈ ವಿಜ್ಞಾನಿ ಕರ್ನಾಟಕದಲ್ಲಿ ದ್ರಾಕ್ಷಿಬೆಳೆಗೆ, ಸಿಮ್ಲಾದಲ್ಲಿ ಸೇಬು ಬೆಳೆಗೆ ಮಾಡಿದ ಸಂಶೋಧನೆಗಾಗಿ ಮ್ಯಾಗ್‌ಸೇಸೆ ಪ್ರಶಸ್ತಿ ಸಿಗಬೇಕೆಂದು ನಿರ್ಧಾರವಾಗಿತ್ತು. ಆದರೆ ಏಲಕ್ಕಿ ಮೇಲೆ ಸಂಶೋಧನೆ ನಡೆಸಿಯೂ ಏಲಕ್ಕಿ ಉತ್ಪಾದನೆ ಕುಸಿಯೋ ಸ್ಥಿತಿ ಬಂತಲ್ಲಾ ಅನ್ನೋದೊಂದೇ ನನಗೆ ಬೇಜಾರು ಏಕೆಂದರೆ ಜೋಗಿಹಾಳರು ಈ ಪ್ರಶಸ್ತಿ ಸಿಗಬೇಕಾದ ಸಂದರ್ಭದಲ್ಲಿ ತೀರಿಕೊಂಡಿದ್ದು ತುಂಬಾ ಅನ್ಯಾಯ, ಅಂದರೆ ಇಲ್ಲಿ ಬೇರೆಬೇರೆ ಯವರ ಆ ವರ್ಗಕ್ಕೆ ಸಂಬಂಧ ಪಟ್ಟವರ ಕೈವಾಡಗಳು ನಡೆದಿದೆ ಎಂಬುದು ಅರಿವಾಗುತ್ತದೆ ಇಲ್ಲಿ ಲೋಹಿಯಾ ರವರು ಹೇಳುವ ಮಾತು :- ಮನಷ್ಯ ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ಏನು ಬೇಕಾದರು ಮಾಡುತ್ತಾನೆ ಆದರೆ ತಾನು ಕುಳಿತ ಸೀಟು ಹಾಗೂ ಅಧಿಕಾರವನ್ನು ಬಿಟ್ಟು ಕೊಡಲು ಅವರು ಒಪ್ಪುವುದಿಲ್ಲ. ಅದರ ಸುತ್ತ ಸುತ್ತುವ ಜನ ಧನದಾಹಿಗಳು ಎಂದು ಗುರ್ತಿಸುತ್ತಾರೆ.

"ಈ ಕೆಸರೂರಿಗೆ ಏನು ಕೊರತೆ? ಯೋಚಿಸಿದಷ್ಟು ಅಂಗಾಡಿಗೆ ಇದೊಂದು ಅಗಮ್ಯ. ಸಮಸ್ಯೆಯಾಗಿ ಕಂಡಿತು ಪರಿಮಳ ಏಲಕ್ಕಿಯನ್ನು ಅರಣ್ಯ ಇಲಾಖೆಯವರು ಹರಾಜು ಹಾಕುತ್ತಿದ್ದರು. ಆದರೆ ಅನಂತರ ಕೆಸರೂರಿನ ರಾಜಕಾರಣಕ್ಕೆ ಹಣ ಸಾಲದೆ ಕೆಸರೂರಿನ ರಾಜಕಾರಣಕ್ಕೆ ಹಣ ಸಾಲದೆ ಅರಣ್ಯ ಇಲಾಖೆಯವರಿಗೆ ಲಂಚ ಸಾಲದೆ ಅವರೆಲ್ಲರ ಆಸೆಗಣ್ಣುಗಳು ಕೆಸರೂರಿನ ಅರಣ್ಯದ ಮೇಲೆ ಬಿತ್ತು. ಕೇರಳದ ಸುಲೇಮಾನ್ ಯೂಸಪ್ ಬೇರಿ ಅನ್ನುವವನಿಗೆ ಕಂಟ್ರಾಕ್ಟ್ ಕೊಡಿಸಿದರು. ಅವನಿಂದ ದೊರೆತ ಥೈಲಿಗಟ್ಟಲೆ ಹಣ ನೋಡಿ ಮಂತ್ರಿಗಳಿಗೂ ಬಾಯಲ್ಲಿ ನೀರೂರಿತು. ಸುಲೇಮಾನ್ ಕೊಂಬೆ ಕಡಿಯ ಹೊರಟವನು ಕಾಂಡಗಳನ್ನೇ ಕಡಿದ. ಲೋಡುಗಟ್ಟಲೆ ಮರದ ದಿಮ್ಮಿಗಳು ಕೆಸರೂರಿನ ಹಾದಿಯಲ್ಲಿ ಮಂಗಳೂರಿನ ದಿಕ್ಕು ಹಿಡಿದವು. ಕೆಸರೂರಿನ ಜನಕ್ಕೆ ವರ್ಷಾಂತರದವರೆಗೆ ಇದೊಂದು ಚಿರಪರಿಚಿತ ನೋಟ. ಅನಂತರ ಕಾಡಿನಡಿಯಲ್ಲಿ ಬೆಳೆದಿದ್ದ ಏಲಕ್ಕಿ ಗಿಡಗಳು ಎಲೆ ಬಾಡಿ ಬಿಸಿಲಿನ ಒಡತಕ್ಕೆ ಕ್ಷೀಣಿಸಿ ಬಹುಬೇಗ ನೆಲ ಹಿಡಿದುವು ಕಾಡು ನೆಲಸಮವಾದಲ್ಲಿ ಲಂಟಾನದ ಅಭೇದ್ಯ ಜಿಗ್ಗು ಕೋಟೆಗಟ್ಟಿ ಕೆಸರೂರನ್ನು ಸುತ್ತುವರಿಯಿತು."

ಹೀಗೆ ಕೆಸರೂರಿಗೆ ಬಂದು ತಲುಪಿದ ರೋಗಗ್ರಸ್ಥ ವ್ಯಕ್ತಿಗಳಿಂದ ಇಡೀ ಕೆಸರೂರೆ ಸಂಪೂರ್ಣ ಭಯಂಕರವಾಗಿ ಯಾರೂ ಬಿಡಿಸಲಾರದ ಚಿಕಿತ್ಸೆ ನೀಡಲಾಗದ ರೀತಿಯಲ್ಲಿ ಲಂಟಾನವಾಗಿ ಬೆಳೆದಿದೆ ಹೀಗೆ ಬೆಳೆದ ಲಂಟಾನ ವಿಷ ಸರ್ಪವಾಗಿ ಯಾರು ಬೆಳೆಸದಿದ್ದರೂ

ತಾನೇ ಬೆಳೆದು ಬಿಡುವ ರೂಪಕವಾಗಿ ಕಾಂದಬರಿಯಲ್ಲಿ ಕಾಣಿಸುತ್ತದೆ, ಭ್ರಷ್ಟ ರಾಜಕಾರಣಿಗಳು ತಾವು ಇರುವ ಕಾಲದಲ್ಲಿ ಹಣ ಸಂಪಾದಿಸಲು ಇಡೀ ಕರ್ನಾಟಕದ ಸ್ವಿಡ್ಜರ್ಲೆಂಡ್ ಎಂದು ಪ್ರಸಿದ್ಧವಾದ ಕಾಡನ್ನೇ ನಾಶ ಮಾಡಲು ಸಿದ್ಧರಾದವರು. ಇಂಥ ಆರ್ಥಿಕ ಭ್ರಷ್ಟಚಾರದ ಅಧಿಕಾರಿಗಳು ಇಂದು ನಮ್ಮ ಸಮಾಜವನ್ನು ಆಳುತ್ತಿದ್ದಾರೆ. ಇಂತಹವರು ಇರುವ ಸ್ಥಳದಲ್ಲಿ ಯಾರು ಬೆಳೆಯದಿದ್ದರೂ ತಮಗೆ ತಾವೇ ಬೆಳೆಯುವ ಜನ. ಲಾಭಗಳಿಕೆಗಾಗಿ ಏನು ಬೇಕಾದರೂ ಮಾಡಲು ಸಿದ್ಧವಿರುವ ಹಣದಾಹಿಗಳು ಇಂದಿಗೂ ಈ ಸಮಾಜದಲ್ಲಿ ವಾಸ್ತವ. ಆದ್ದರಿಂದ ಅವರ ಆಲೋಚನೆಗಳೆ ಲಂಟಾನವಾದಾಗ ಅವರಿಂದ ಪರಿಸರವೇ ಅಲ್ಲ ಉತ್ತಮ ಅಧಿಕಾರಿಗಳು ಉತ್ತಮರೆಂದೆನ್ನಿಸಿಕೊಳ್ಳಲು ಸಾಧ್ಯವಿಲ್ಲ. ಇಂತಹ ಕುತಂತ್ರವೇ ಜೋಗಿಹಾಳರನ್ನು ಏಕೆ ಬಲಿ ತೆಗೆದುಕೊಂಡಿರಬಾರದು. ಏಕೆಂದರೆ ಲಂಟಾನದಂತ ಮಾಯಾವಿ ಗಿಡವನ್ನು ಬೇರು ಸಮೇತ ಕಿತ್ತೊಗೆದರೆ. ಅಲ್ಲೇ ಬೇರು ಕೊಡುತ್ತಿದೆ. ಕಡ್ಡಿ ಮುರಿದೆಸೆದರೆ ಅದೇ ಬೇರು ಕೊಟ್ಟು ಚಿಗುರೊಡೆಯುತ್ತಿದೆ. ಬಳ್ಳಿಯಂತೆ ಮರಕ್ಕೆ ಹತ್ತುತ್ತದೆ. ಪೊದೆಯಂತೆ ಸ್ವತಂತ್ರವಾಗಿ ನಿಂತು ಬೆಳೆಯುತ್ತದೆ. ಲಂಟಾನದ ಈ ಭಯಾನಕ ಜಿಗ್ಗು ಏಲಕ್ಕಿಯ ಕುತ್ತಿಗೆ ಹಿಸುಕಿ ಕಾಡನ್ನೆಲ್ಲಾ ಆಕ್ರಮಿಸಿತ್ತು. ಜನರ ನಿರ್ಲಿಪ್ತ ಅಸಹಾಯಕತೆಯಲ್ಲಿ ಒಂದು ಸಂಸ್ಕೃತಿಯ ಅವಸಾನವನ್ನೈದುತ್ತಿರುವಾಗ ಏನೆಲ್ಲ ಸಂಭವಿಸುತ್ತದೆಯೋ ಅದಲ್ಲಾ ಕೆಸರೂರಿನಲ್ಲಿ ಆರಂಭವಾಯಿತು. ಹೀಗೆ ಲಂಟಾನ ಮುಂದೆ ಆ ಸಂಸ್ಕೃತಿಯ ಏಲಕ್ಕಿಯನ್ನು ನಂಬಿ ಬದುಕು ಸಾಗಿಸುವವರಿಗೆ ಈ ಲಂಟಾನದಿಂದ ಬಿಡಿಸಿಕೊಳ್ಳಲು ಸಾಧ್ಯವಾಗದೆ ಇರುವ ಸಂದರ್ಭಗಳು ಒದಗಬಹುದಾಗಿದೆ. ಅಷ್ಟೇ ಅಲ್ಲದೆ ಆ ಸಮಾಜವನ್ನು ಬದಲಾವಣೆಯ ಸ್ಥಿತಿಗೆ ತರುವುದಕ್ಕೂ ಸಾಧ್ಯವಿಲ್ಲದಂತೆ ಸ್ಥಗಿತ ಚಲನೆಯನ್ನು ಈ ಲಂಟಾನ ಸೂಚಿಸುತ್ತದೆ. ಲಂಟಾನ ಮುಂದೆ ಆ ಸಮಾಜದಲ್ಲಿ ಉಳಿಯುವ ಸಂಸ್ಕೃತಿಯನ್ನೇ ತನ್ನ ಹಿಡಿತಕ್ಕೆ ತೆಗೆದು ಕೊಳ್ಳವ ಒಂದು ಶಕ್ತಿಯಾಗಿ ಉಳಿದು ಬಿಡುತ್ತದೆ. ಎಂಬ ಕಾಲಜ್ಞಾನವು ಕದ ತಟ್ಟುವುದನ್ನು ಕಾದಂಬರಿ ಗುರ್ತಿಸುತ್ತಿದೆ ಏಲಕ್ಕಿ ಬೆಳೆ ಕುಸಿಯತೊಡಗಿದೆ. ಗೊಬ್ಬರ ಹಾಕಿ ಔಷದಿ ಸಿಂಪಡಿಸಿ ಏನೇನುಮಾಡಿದರು ಉಪಯೋಗ ಕಾಣುತ್ತಿಲ್ಲ. ಲಂಟಾನ ರಾಕ್ಷಸ ತೋಟದ ಬೇಲಿಯಾಚೆ ನುಗ್ಗಲು ಕಾದು ಕುಳಿತಿದ್ದಾನೆ. ಹೀಗೆ ಆ ಸಮಾಜ ಹಾಗೂ ಅಲ್ಲಿನ ಜನರ ಆಲೋಚನೆಗಳಲ್ಲಿಯೂ ನುಗ್ಗುವ ಈ ಲಂಟಾನ ಹಣದ ಆಸೆ ತೋರಿಸುವುದರ ಮೂಲಕ ಅಧಿಕಾರಿಗಳನ್ನು ತನ್ನ ಕೈ ವಶಕ್ಕೆ ಬಾರದವರನ್ನು ಬರುವಂತೆ ಮಾಡುತ್ತದೆ. ಹೀಗೆ ಅನುಮಾನಕ್ಕೆ ಸಿಕ್ಕ ಜೋಗಿ ಹಾಳರ ಸಾವು ಈ ತರದಲ್ಲಿಯೇ ಇರಬಹುದು. ಎಂದು ಶಂಕೆ ಅಂಗಾಡಿಯಲ್ಲಿ ಮೂಡ ತೊಡಗಿತ್ತು.

ಏಲಕ್ಕಿಗೆ ಈಗ ಪ್ರಕೃತಿ, ಪರಿಸರ, ಸಮಾಜ ಎಲ್ಲಾ ಕಡೆಯಿಂದ ವೈರಿಗಳ ಹಾವಳಿ ಆರಂಭವಾಗಿದೆ. ಯಾವ ದಿಕ್ಕಿನಲ್ಲಿ ಸಂಶೋಧನೆ ಮಾಡಲು ತೋಚದ ಪರಿಸ್ಥಿತಿ. ಎಂಬುದು ಅಂಗಾಡಿಗೆ ಸಂಪೂರ್ಣ ಅಲ್ಲಿನ ಸಮಾಜ ರಹಸ್ಯವಾಗಿ ಕಾಣುತ್ತದೆ. ಏಕೆಂದರೆ ಈ ರಹಸ್ಯದಲ್ಲಿ ಒಂದರ ಕೈ ಕೆಳಗೆ ಮತ್ತೊಂದು ಕೈ ಸೇರಿಕೊಂಡಿದೆ ಅದ್ದರಿಂದ ಹೊರ ಜಗತ್ತಿಗೆ ಸಮಸ್ಯೆ ಕಾಣಿಸುತ್ತಿದೆ. ಅದಕ್ಕೆ ಕಾರಣಗಳನ್ನು ಹುಡುಕುತಿದ್ದಾರೆ ಆದರೆ ಅದಕ್ಕೆ ಬೇಕಾದ ಅದರದ್ದೇ ಆದ ಪರಿಹಾರದ, ಸಮಸ್ಯೆಗೆ ತಕ್ಕ ಉತ್ತರ ಸಿಗದೆ ಇರುವುದು 'ಅಲ್ಲಿನ ಸಮಾಜಕ್ಕೆ ಹೊರಗಿನಿಂದ ಬಂದ ಕೆಸರೂರಿನ ಸ್ಥಳೀಯತೆಯಲ್ಲಿ ಭದ್ರವಾಗಿ ಕುಳಿತ ಹಾಗೂ ಆ ಸಮಾಜವನ್ನೇ ವಿನಾಶಕ್ಕೆ ತಳುವ ಕೈವಾಡ ಬಂದಿದೆ.' ಇದೆ ಮುಂದೆ ಕಿಚ್ಚಾಗಿ ಹೊಗೆಹಾಡುತ್ತದೆ. ಇಡೀ ಸಮಾಜವೇ ಸಂಪೂರ್ಣ ಅವನತಿಯ ಕಡೆಗೆ ಚಲಿಸುವ ಹಾಗೆ ತನ್ನ ಗರ್ಭದಲ್ಲಿಯೇ ಅಂತಹ ವಿಷದ ಬೀಜಗಳನ್ನು ಪೋಷಿಸುತ್ತದೆ. ಹೊರಗಿನಿಂದ ಬಂದು ಬದುಕು ಆರಂಭಿಸಿದೊಡನೆ ಅದು ಅನುಭವಕ್ಕೆ ಬರ್ತದೆ.

ಕಾಫಿ ಸಂಸ್ಕೃತಿ ವಿಚಾರವಾಗಿ ಎಂ.ಎ ಪದವಿಧರ ವಿವರಿಸಿದ್ದು ಹೀಗೆ "ಅನುಕೂಲಕರವಿಲ್ಲದವನು ಇವತ್ತು ತನಗೆ ಕಾರಿಲ್ಲಾಂತ ಕೊರಗುತ್ತಾ ಶ್ರೀಮಂತ ಬಂಧುಗಳ ಕಣ್ಣಿಗೆ ಬೀಳಿದ ಹಾಗೆ ಕದ್ದು ಬಸ್ಸಿಗೆ ಕಾಯುತ್ತಾ ಕೂಡಬೇಕಾಗಿದೆ. ಇವೆಲ್ಲ ಗೊತ್ತಾಗಿತ್ತ ಸಾರ್! ಕಾಫಿ ಕಲ್ಚರ್ ಅಂದಿದ್ದು ನಾನು ಇದನ್ನೆ ಈ ಯೂರೋಪಿಯನ್ನರನ್ನು ಅನುಸರಿಸಿಸೋ ಚಾಳಿ! ಅದು ಜಾಗತಿಕ ಸಂಗತಿ. ಆಧುನೀಕರಣ ಅಂದರೆ ಇವತ್ತು ಪಾಶ್ಚಿಮಾತ್ಯರ ಅನುಕರಣೆ." ಹೀಗೆ ಅನುಕರಣೆಗೆ ಒಳಗಾದ ಜನ ತಮ್ಮ ಆದರ್ಶಗಳನ್ನೇ ಮರೆತು ನಮ್ಮವರನ್ನೇ ಆಳುವುದಕ್ಕೆ ಶುರು ಮಾಡಿಬಿಟ್ಟಿದ್ದಾರೆ ಏಕೆಂದರೆ ಸಂಪೂರ್ಣ ವೈಚಾರಿಕತೆಯಿಂದ ತುಂಬಿದ ಪ್ರಜ್ಞೆಯಿಂದ ಎಲ್ಲವನ್ನೂ ಗೆಲ್ಲುವುದಕ್ಕೆ ಸಾಧ್ಯವಿಲ್ಲ. ಹಾಗೆಂದು ಮೌಢ್ಯತೆಯಿಂದ ಎಲ್ಲವನ್ನೂ ಕಳೆದು ಕೊಳ್ಳುವುದು ಸಾಧ್ಯವಿಲ್ಲ. ಏಕೆಂದರೆ ಮುಖವಾಡ ಧರಿಸಿದ ಆಧುನೀಕರಣ ಒಂದು ದಿಕ್ಕಿನಲ್ಲಿ ವೈಚಾರಿಕತೆಯನ್ನು ಹೇಳುತ್ತಿದ್ದರೂ. ಮತ್ತೊಂದು ದಿಕ್ಕಿನಿಂದ ಈ ದಿಕ್ಕನ್ನು ಆಳುವಿಕೆಗೆ, ದುರಾಸೆಗೆ, ಸ್ವಾರ್ಥಕ್ಕೆ ತಿಳಿಯುತ್ತಿದೆ. ಆದ್ದರಿಂದಲೇ ನಮ್ಮ ಸಂಸ್ಕೃತಿ ನಮ್ಮಿಂದ ಹೋಗ್ತಿದೆ. ತಂದೆ–ತಾಯಿ, ಬಂದು–ಬಳಗ ಅಂತ ಭಾವನೇನೇ ಇಲ್ಲ. ಎಲ್ಲ ಚೊಟ್ಟಕಾರನ ತರ ಆಡೋರೆ! ಭಯ ಭಕ್ತಿ, ಧೈರ್ಯದವರು ಕೇಳಬೇಡಿ ಸಂಶೋಧನ ಕೇಂದ್ರದಲ್ಲಿ ಒಂದು ದೇವಸ್ಥಾನ ಜೀರ್ಣೋದ್ಧಾರ ಮಾಡೋದಕ್ಕೆ ಹೋದರೆ ಯಾವ್ಯಾವತರ ತೊಂದ್ರೆ ಬರ್ತಿದೆ ನೋಡಿ, ಅದೇನು ಸ್ವಂತ ಕೆಲಸ ಅಲ್ಲ, ಏನೂ ಅಲ್ಲ ದೇವರ ಕೆಲಸ"! ಹೀಗೆ ಸಂಶೋಧನೆಯಲ್ಲಿಯೂ ದೇವರ ಕೆಲಸಗಳಿವೆ. ಎಂದಾಯ್ತಲ್ಲ ಲಾಭ ಗಳಿಕೆಗಾಗಿ ಸಂದರ್ಭಗಳನ್ನೇ ಹೊಂಚು ಹಾಕುತ್ತಾರೆ, ಸಮಯ ಸಾಧಿಸುತ್ತಾರೆ, ಆದರೆ ಗೌಡರ ಮಾನಸಿಕ ಲೋಕ ತಮ್ಮ ಜಿಲ್ಲೆಯ ಬಂಜರು ತನ್ನಕ್ಕೆ ದೆವ್ವದಲ್ಲಿ, ದೇವರಲ್ಲಿ ಸನಾತನ

ಧರ್ಮದಲ್ಲಿ ನಂಬಿಕೆ ಇಲ್ಲದುದೇ ಕಾರಣ. ಎಂದು ಹೇಳುವುದಕ್ಕೆ ಆ ಕೆಸರೂರಿನ ಮಾನಸಿಕ ಲೋಕಗಳು ತೆರೆದು ಕೊಂಡಿರುವ ಭಿನ್ನ ,ರಹಸ್ಯ ಹಾಗೂ ರೋಗಗ್ರಸ್ಥವಾಗಿರುವುದೇ ಮುಖ್ಯಕಾರಣವೆಂದು ಗುರ್ತಿಸಬಹುದು.ಆದ್ದರಿಂದಲೇ ಗೌಡರು ಹೇಳುವ "ನಂಬಿಕೆ ಇಲ್ಲದೆ ಇರುವುದು" ಎಂಬ ಪದ ಸೂಚಿಸುತ್ತದೆ. ಇಲ್ಲಿ ಮುಖ್ಯವಾಗಿ ಸಸ್ಯೂರ್ ಹೇಳಿದ ಸೂಚಿತ ಸೂಚಕಗಳ ಪರಿಕಲ್ಪನೆಗಳು ಹೇಗೆ ಯಾಧೃಚ್ಚಿಕವಾಗಿ ಉಚ್ಚರಣೆಗೆ ಒಳಗಾದರೆ ಹೇಳುಗ - ಕೇಳುಗನ ಮನಸ್ಸನಲ್ಲಿ ಮೂಡುವ ಆ ಪರಂಪರೆಯ ಅರ್ಥ ಪರಿಕಲ್ಪನೆಗಳು ಈ ಪದಗಳನ್ನು ಅರ್ಥೈಸುತ್ತವೆ. ಹಾಗೂ ಅಲ್ಲಿನ ಸಾಂಸ್ಕೃತಿಕ ಲೋಕ ಯಾವ ಅರ್ಥಕ್ಕೆ ತೆರೆದುಕೊಂಡಿದೆ ಎಂಬುದನ್ನು ಗಮನಿಸ ಬಹುದಾದ ಅಂಶವಾಗಿದೆ.

ಮುಂದೆ ರೋಗಗ್ರಸ್ಥವಾದ ಸಮಾಜ ಲಂಟಾನದ ಕೃಪೆಯಿಂದ ಏಲಕ್ಕಿಯ ಬೆಲೆಯನ್ನು ಕುಸಿಯುವ ಹಾಗೆ ಮಾಡಿದೆ. ಅದಕ್ಕಾಗಿ ಪಾಟೀಲರು ಕೆಸರೂರಿನ ಏಲಕ್ಕಿಗೆ ಕೆಸರೂರಿನ ಸಂಸ್ಕೃತಿಗೆ ,ಒಟ್ಟಿಗೇ ರೋಗ ತಗುಲಿಕೊಂಡಿದೆ. ಎಂದಾಗ ಈ ಮಾತಿನ ಮರ್ಮವನ್ನು ತಿಳಿಯಲು ಹೋದ ಅಂಗಾಡಿಗೆ ಕೆಸರೂರಿನ ರೋಗ ಒಂದರೊಳಗೊಂದು ಸಂಯೋಜನೆಗೊಂಡತೆ ತೋರುತ್ತದೆ ಆದರೆ ಡಾ. ಪಾಟೀಲ್ ಕೆಸರೂರಿನ ಈ ರೋಗಕ್ಕೆ ಇಲ್ಲಿರುವ ಜನಾಂತ ಹೇಳಲೋ? ಅಥವಾ ಕೆಸರೂರು ವೈರಸ್ ಖಾಯಿಲೆ ಅಂತ ಹೇಳಲೋ? ಎಂದು ವಿವರಿಸುತ್ತಾನೆ. ವೈರಸ್ ತುಂಬಿರುವ ಈ ಗಿಡಗಳು ಸಾಯದೆಯೂ ಬದುಕದೆಯೂ ಉಳಿದುಕೊಂಡಿರುತ್ತದೆ. ಬೆಳೆಗಾರರು ಗೊಬ್ರಾ ಔಷಧಿ ಅಂತ ಕೈಲಿದ್ದಿದನ್ನೆಲ್ಲಾ ಕಳೆದುಕೊಳ್ಳುವವರೆಗೂ ಇವು ಜೀವಂತವಾಗಿರುತ್ತವೆ. ಕೊನೆಗಾಲದಲ್ಲಿ ಈ ಗಿಡಗಳ ಎಲೆ ಕಿತ್ತು ಮೈಕ್ರಾಸ್ಕೋಪಿನಲ್ಲಿ ನೋಡಿದರೆ ಎಲೆಗಳೊಳಗಡೆ ಬಿಳಿ ನರಗಳಂತೆ ವೈರಸ್ ಎಲೆಯ ಹರಿತ್ತನ್ನೆಲ್ಲಾ ತಿಂದು ಹಾಕಿರೋದು ಕಾಣ್ತದೆ.

ಪಾಟೀಲರು ಗಮನಿಸಿದ ಸಮಸ್ಯೆ ಆ ಏಲಕ್ಕಿ ಗಿಡಗಳದ್ದು ಮಾತ್ರವಲ್ಲ ಕೆಸರೂರಿನ ಸಂಪೂರ್ಣ ನಾಶಕ್ಕೆ ಸಂಬಂಧಿಸಿದಂತೆ ಅಲ್ಲಿ ನಡೆಯತ್ತಿರುವ ಮತೀಯತೆಯನ್ನು ಗಮನಿಸಿರುತ್ತಾರೆ, ಸುಲೇಮಾನ್ ಬೇರಿ ಕೈಯಲ್ಲಿ ಲಂಚ ತಿಂದು ಕಾಡು ಮಾರಿಕೊಂಡ್ರಲ್ಲಾ ಆಗಲೇ ಇದ್ದರೂ ಇರಬಹುದು. ಅಷ್ಟೇ ಅಲ್ಲದೆ ರಾಜಕಾರಣಗಳು! ದೇವರು! ಮಸೀದಿ! ಮೈಕು! ಭಜನೆ! ದಳ್ಳುರಿ ಹಬ್ಬುತ್ತಾ ಹೋಗುತ್ತದೆ. ಕೆಟ್ಟ ಮೇಲೆ ಬುದ್ದಿ ಬಂತು ಅಂತಾರೆ ಇದು ತಪ್ಪು, ಕೆಡ್ತಾ ಕೆಡ್ತಾ ಬುದ್ಧೀನೂ ಕೆಡ್ತಾ ರೋಗ ಜೋರಾಗ್ತ ಹೋಗುತ್ತೆ, ತನಿಖೆ ಮಾಡಿ ಗೊತ್ತಾಗುತ್ತ! ಪರಿಸ್ಥಿತಿಯ ಲಾಭ ಮಾಡಿಕೊಳ್ಳೋರೂ ಮುಳುಗಿದಾರೆ, ಹೀಗೆ ಪಾಟೀಲ್, ಆ ಸಮಾಜ ಚಲಿಸುತ್ತಿರುವ ದಿಕ್ಕನ್ನು ಹಿಡಿದು ಅಲ್ಲಿರುವ ಸಮಸ್ಯೆಯನ್ನು ಹುಡುಕುತ್ತಾರೆ, ಆದರೆ ಮೊದಲೇ ಲಂಚ ತಿಂದ ಕೈಗಳು,

ಪಾಟೀಲರನ್ನು ಮತ್ತೊಂದು ರೀತಿಯಲ್ಲಿ ಅರ್ಥೈಸುವುದಕ್ಕೆ ಮುಂದುವರೆಯುತ್ತಾರೆ. ಅಂದರೆ ಕೆಸರೂರು ಈಗಾಗಲೇ ಹಲವು ರೋಗರುಜ್ಜಿನಗಳ ಆಗರವಾಗಿದೆ, ಈ ಪರಿಸರದಲ್ಲಿ ಹಲವು ಚಿಂತನೆಗಳಿದ್ದು ಆ ಚಿಂತನೆಗಳು ಒಂದು ಪರಿಸರವನ್ನೇ ಸೃಷ್ಟಿಸುತ್ತದೆ ಇವರು ಪರಿಸರವನ್ನು ಹಾಳು ಮಾಡಿ ತಮಗೆ ಬೇಕಾದ ಪರಿಸರವನ್ನು ನಿರ್ಮಿಸಿಕೊಂಡಿದ್ದಾರೆ ಆದರೆ ನಿರ್ಮಿಸಿಕೊಂಡ ಪರಿಸರದ ಯೋಗ್ಯತೆ ಸರಿಯಾಗಿದೆಯೇ! ಇಲ್ಲಿ ಇರುವ ಪರಿಸರವು ರೋಗಗ್ರಸ್ಥವಾಗಿದೆ. ಸೃಜಿಸಿ ಕೊಂಡ ಪರಿಸರಕ್ಕೂ ಮತ್ತಷ್ಟು ರೋಗತಗುಲಿದೆ, ಹೀಗೆ ರೋಗದ ಪರಿಸರವನ್ನೇ ನಿರ್ಮಿಸಿಕೊಂಡ ಸುಲೇಮಾನ್ ಬ್ಯಾರಿ ಹಾಗೂ ಅವನ ಸಹಚರರು ಸಂಪೂರ್ಣವಾಗಿ ಅವನ್ನು ನಿರ್ಮಿಸಿದ ಪರಿಸರಕ್ಕೆ ಅಂಟ್ಟಿಕೊಂಡು ಅವನು ಕೊಡುವ ಹಣದ ಆಸೆಗೆ ಸಂಪೂರ್ಣ ಬ್ಯಾರಿಗೆ ಬೇಕಾದವರಾಗಿ ಇಲ್ಲಿನ ಜನ ನಿರ್ಮಾಣವಾಗಿರುವುದು ಕಾಣಬಹುದಾಗಿದೆ ಹೀಗೆ ಪರಿಸರದ ನಾಶಕ್ಕೆ ಬ್ಯಾರಿ ಒಂದು ರೀತಿಯಲ್ಲಿ ಕಾರಣವಾದರೆ ಅವನು ಬಳಸಿಕೊಂಡ ರಾಜಕಾರಣಗಳು ಶ್ರೀಮಂತರು ಇನ್ನೊಂದು ರೀತಿಯಲ್ಲಿ ಕಾರಣರಾದರು. ಏನೇ ಆಗಲಿ ಇದರ ವಿರುದ್ದ ವಿರುವ ಜೋಗಿಹಾಳರ ಕೊಲೆ ನಡೆಯುವುದರಲ್ಲಿ ಸಂಶಯವೇ ಇಲ್ಲ, ಏಕೆಂದರೆ ನಿರ್ಮಾಣವಾಗುವ ಪರಿಸರಕ್ಕಿಂತ ನಿರ್ಮಿಸಿಕೊಳ್ಳುವ ಪರಿಸರ ತುಂಬಾ ಅಪಾಯಯಕಾರಿ ಇಲ್ಲಿ ಅಳಿವು ಉಳಿವಿನ ಪ್ರಶ್ನೆಗಳೇ ಉದ್ಭವಿಸುತ್ತವೆ ಆದ್ದುದರಿಂದ ನಿರ್ಮಿಸಿಕೊಂಡ ಪರಿಸರವನ್ನು ಸಂಪೂರ್ಣ ಕಾಪಡಿಕೊಳ್ಳಲು ನಿರಂತರ ಪ್ರಯತ್ನಗಳು ನಡೆಯ ಬೇಕು. ಒಂದು ರೀತಿಯಲ್ಲಿ ಲೋಹಿಯಾರವರು ಗುರ್ತಿಸಿಕೊಂಡ ಹಾಗೆ ಸಮಾಜದಲ್ಲಿ ಅಧಿಕಾರದಲ್ಲಿ ಇರುವವರು ತನ್ನ ಸುತ್ತ ಮುತ್ತಣ ಪರಿಸರ ಹಾಳಾದರೂ ಪರವಾಗಿಲ್ಲ. ತಾನು ಚೆನ್ನಾಗಿರ ಬೇಕು. ಚೆನ್ನಾಗಿರ ಬೇಕೆಂದರೆ ಬೇರಿಯಂಥವರನ್ನು ಬಳಸಿಕೊಳ್ಳ ಬೇಕು. ಎಷ್ಟೇ ರೋಗ್ರಸ್ಥವಾದರು ತಾನು ನಿರ್ಮಿಸಿಕೊಂಡ ಪರಿಸರದ ಒಳಗೆ, ಅವರು ಬದುಕುತ್ತಾರೆ ಏಕೆಂದರೆ ಅವರ ಮೂಲಕ ನಡೆಯ ಬಹುದಾದ ಸಮಾಜ ಅವರಿಂದಲೇ ನಾಶವಾಗುವುದಕ್ಕೆ ಕಾರಣವಾಗುತ್ತದೆ. ಅದಕ್ಕಾಗಿ ಇಂಥಹ ಪರಿಸರದ ವಿರುದ್ಧ ತಿರುಗಿ ಬಿಳುತ್ತಿದ್ದ ಪಾಟೀಲ್‌ರವರನ್ನು ಆ ಸಮಾಜ ಅಂಚಿಗೆ ತಳುತ್ತದೆ. ಅಂದರೆ ಒಂದು ರೀತಿಯಲ್ಲಿ ಹಾಳಾಗ ಬಯಸುವ ಸಮಾಜದ ಜನರ ಪರಿಸರ ಹಾಗೂ ಪಾಟೀಲ್ ಇವರಿಬ್ಬರು ಸಹ ಬೇರೆಯಾಗುವ ಸಹಯೋಗದಿಂದ ಅಂಚಿಗೆ ಹೋಗುವವರಾಗಿ ಕಾಣುವುದು ತಿಳಿಸುತ್ತದೆ ಕೃತಿ. ಏಕೆಂದರೆ ವೈಜ್ಞಾನಿಕವಾಗಿ ಮಾಡುವ ನಿರ್ಣಯ ಕ್ರಿಯೆಗಳು ಅಲ್ಲಿನ ಪರಿಸರಕ್ಕೆ ಬೇಕಾಗಿರಲ್ಲಿಲ್ಲ. ಆದ್ದರಿಂದಲೇ ವಿಜ್ಞಾನಿಗಳೂಂತೀರ ಮತ್ಯಾಕೆ ತಂತ್ರ ಮಂತ್ರ ಮಾಡ್ತಾರೆ ವಿಜ್ಞಾನಕ್ಕೂ ಇದಕ್ಕೂ ಏನು ಸಂಬಂಧ? ಎಂದು ವಿದ್ಯಾರ್ಥಿಗಳು ಕೂಗಿಕೊಳ್ಳುತ್ತಿರುವಾಗ ಪಾಟೀಲ್ ಉತ್ತರಿಸಲು ಬರುತ್ತಾರೆ ಆದರೆ ಪ್ರಿನ್ಸಿಪಾಲರು ನಿರ್ಮಿಸಿಕೊಂಡ ಪರಿಸರದಿಂದ ತನಗೆ ಅವಮಾನ ಕಟ್ಟಿಟ್ಟ ಬುತ್ತಿ ಎಂದು ತಿಳಿದು ಅದನ್ನು ನಿಯಂತ್ರಿಸಲು ಹೋದ ಪಾಟೀಲ್ ವಿರುದ್ಧವೇ ಘೋಷಣೆಗಳು ಕೂಗ ತೊಡಗಿದವು ಅತ್ತ ಹೇಳಬೇಕಾಗಿರುವ

ವಿಚಾರವು ಪ್ರಸ್ತಾಪವಾಗದೆ ಬೇರೆ ರೀತಿಯಾದ ವಿಚಾರಗಳಿಗೆ ಬೆಲೆ ಕಟ್ಟಬೇಕಾದ ಸಂದರ್ಭ ಒದಗಿ ಬರುತ್ತದೆ ಕಾರಣ ಆ ಸಮಾಜದಲ್ಲಿಯೇ ನಿರ್ಮಿಸಿಕೊಂಡ ಜಾತಿಗಳ, ಧರ್ಮಗಳ ಘರ್ಷಣೆಯೇ ಆಗಿರುತ್ತದೆ ಅಷ್ಟೇ ಅಲ್ಲದೆ ಪ್ರಿನ್ಸಿಪಾಲರ ಒಳ ಪಿತೂರಿ ವೆಂಕಟೇಶ್ವರ ದೇವಸ್ಥಾನದ ಕಾರ್ಯಕ್ರಮದಲ್ಲಿ ಮಹತ್ವದ ಪಾತ್ರ ವಹಿಸಿದ್ದರು ಅಲ್ಲದೇ ವೈಜ್ಞಾನಿಕವಾಗಿ ಚಿಂತಿಸುತ್ತಿದ್ದ ಪಾಟೀಲರನ್ನು ಹೇಗಾದರೂ ಮಾಡಿ ಅವರನ್ನು ದೇವಸ್ಥಾನದ ಸಂಸ್ಥೆಗೆ ಸೇರಿಸಬೇಕೆಂದು ನಿರ್ಧರಿಸಿ ಆ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳನ್ನಾಗಿ ಕರೆದಿರುತ್ತಾರೆ ಆದರೆ ಸಂದರ್ಭ ವಿಕೋಪಕ್ಕೆ ತಿರುಗಿದಾಗ ಪಾಟೀಲರು ಸಹ "ನೋಡಿ ನಾನು ಮಂತ್ರ ಮಾಯ ಮಾಡೋ ವಿಜ್ಞಾನಿ ಅಲ್ಲ ಚೇಳು ಮಂತ್ರ ಒಂದು ವೈಜ್ಞಾನಿಕ ಚಿಕಿತ್ಸೆ ಅಷ್ಟೇ ಅದರ ಸತ್ಯಾ ಸತ್ಯತೆಗಳನ್ನು ವೈಜ್ಞಾನಿಕವಾಗಿ ತಿಳಿಯ ಬೇಕು ಹಾಗೂ ತಿಳಿದು ಕೊಳ್ಳಬೇಕಾದದ್ದು ವಿಜ್ಞಾನ ಎಂದು ವಿವರಿಸಿದರು". ಆದರೂ ಅವರ ಮಾತನ್ನು ಕೇಳಲು ಸಿದ್ದವಿರದ ಹಾಗೂ ಕೇಳುಗರು ನೋಡಿ ನಂಬಿರುವ ವಿಚಾರಗಳೇ ಮುಖ್ಯವಾಗಿದ್ದವೇ ಹೊರೆತು ವೈಜ್ಞಾನಿಕವಾಗಿ ಆಲೋಚನೆ ಮಾಡುವ ಪಾಟೀಲರ ಮಾತು ಯಾರಿಗೂ ಬೇಡವಾಗಿತ್ತು. ಇಲ್ಲಿ ನೋಡುಗ ನಿರ್ಮಿಸಿಕೊಂಡ ಪರಿಸರವನ್ನು ಒಡೆಯಲು ಎಷ್ಟೇ ಪ್ರಯತ್ನಿಸಿದರು ಬಿಡಿಸಲಾರದ ನಂಟಾಗಿರುತ್ತದೆ ಸಂಪೂರ್ಣ ಸ್ಥಗಿತಗೊಂಡ ಚಲನೆ ಕಳೆದು ಕೊಂಡ ಕೆಸರಾಗಿರುತ್ತದೆ ಆದ್ದರಿಂದಲೇ ಪಾಟೀಲರ ವಿರುದ್ದ ಘೋಷಣೆಗಳು ಕೂಗಿ ಕೊಂಡವು ಇದರಿಂದ ಕೆಸರೂರಿನ ಖಾಯಿಲೆಗೆ ಇಡೀ ಒಂದು ಜನಪದವೇ ಸಿಕ್ಕಿದ್ದನ್ನು ಕಂಡರು. ಪಾಟೀಲರು ಹೀಗೆ ನಿಮಾರ್ಣವಾಗಿರುವ ಪರಿಸರಕ್ಕಿಂತ ಮನುಷ್ಯನಿಂದ ನಿರ್ಮಾಣವಾದ ಆ ಪರಿಸರವೇ ಹದ ಗೆಡಿಸುತ್ತದೆ. ಆದರೆ ಇಲ್ಲಿ ತಿಳಿಯ ಬೇಕಾದ ಅಂಶವೆಂದರೆ ಸುಲೇಮಾನ್ ಬ್ಯಾರಿ ಭ್ರಷ್ಟ ರಾಜಕಾರಣಿಗಳು ಸೇರಿ ನಿರ್ಮಿಸಿಕೊಡ ಪರಿಸರ, ತಾನೇ ತಾನಾಗಿ ನಿರ್ಮಿತ ಪರಿಸರಗಳ ವಿರುದ್ಧ ಒಂದರ ಕೈ ಮತ್ತೊಂದರ ಮೇಲೆ ಹೋಗಲು ನಿರ್ಧರಿಸುತ್ತವೆ. ಆದರೆ ಮೇಲೆ ಹೋಗಲು ಹವಣಿಸುವ ಎರಡು ಕೈಗಳಲ್ಲಿ ಒಂದು ಮತ್ತೊಂದರ ವಿರುದ್ದ ಹೊರಾಡಲು ನಿರ್ಧರಿಸಿ ಸೋಲುತ್ತವೆ. ಒಂದು ಸಂದರ್ಭದಲ್ಲಿ ನಿರ್ಮಿತ ಪರಿಸರದ ಕೈ ಮೇಲಾದರೆ ಮತ್ತೊಂದು ಸರಿ ನಿರ್ಮಿಸಿ ಕೊಂಡ ಪರಿಸರದ ಕೈ ಮೇಲಾಗಬಹುದು ಈ ಎರಡು ಹೋರಾಟಗಳ ವಿಷಯದಲ್ಲಿ ಎರಡು ಘರ್ಷಿಸಿ ಸೊಲುತ್ತದೆ. ಅಂದರೆ ಎರಡು ಮೇಲಾಟಗಳು ಕಾಲ್ಪಾನಿಕವೆ ಒಂದು ಬಾರಿ ಒಂದರ ಕೈ ಮೇಲಾದರೆ ಮತ್ತೊಂದು ಬಾರಿ ಇನ್ನೊಂದು ಕೈ ಮೇಲಾಗಬಹುದು. ಹಾಗಾಗಿ ಕೆಸರೂರಿನ ಸಮಾಜದಲ್ಲಿ ನಿರ್ಮಿಸಿಕೊಂಡವರ ಸಮಾಜದ ಬಗ್ಗೆಗೆ ಭವಿಷ್ಯ ನುಡಿದ ಪಾಟೀಲರು ಈ ರೀತಿಯಾಗಿ ಹೇಳು ವುದು ಮುಖ್ಯವಾಗಿರುತ್ತದೆ "ಕಿಡಿ ಬಿದ್ದು ಬೆಂಕಿ ಹತ್ತಿ ಕೊಳ್ಳಲಿ ಬಿಡು, ಈ ಜ್ವಾಲಾಮುಖಿ ಮೇಲೆ ಯಾವತ್ತೂ ಸಿಡಿಯತ್ತೋ ಅಂತ ಕೂತೀರೊದರ ಬದಲು ಆಗೋದೆಲ್ಲಾ ಆಗಿಬಿಡೋದು ಒಳ್ಳೇದಲ್ಲವೆ? ಕೆಸರೂರಿನ ಖಾಯಿಲೆಗೆಲ್ಲಾ ಅದೊಂದೆ ಮದ್ದೂಂತ ಪಾಟೀಲರು

ಹೇಳ್ತಾರೆ". ಅಂದರೆ ಅತಿಯಾದ ಬುದ್ಧಿ ಮನುಷ್ಯನ ವಿನಾಶವೇ ಅದೇ ರೀತಿಯಲ್ಲಿ ವೈಚಾರಿಕತೆಯಿಂದ ಅಲ್ಲಿನ ಸಮಾಜದ ಭವಿಷ್ಯವನ್ನು ಕಟ್ಟಿ ಕೊಂಡಂತಿದೆ ಏಕೆಂದರೆ ಆಧುನಿಕತೆಗೆ ತೆರೆದುಕೊಂಡ ಬಹುಸಂಖ್ಯಾತ ಸಂಪ್ರದಾಯಸ್ಥರ ತಲ್ಲಣಗಳೂ ಆಧುನಿಕ ಸುಧಾರಕರ ತಲ್ಲಣಗಳೇ ಹೆಚ್ಚು ಪರಿಣಾಮಕಾರಿಯಾಗಿ ಶೋಧಿಸಲ್ಪಟ್ಟಿವೆ ಕಾದಂಬರಿ ಹೊಸ ಕೆಸರೂರಿನ ಸೃಷ್ಟಿಯ ಆಶಯದಿಂದ ಜಾತಿ ಮೂಲದ ಕ್ರೌರ್ಯವನ್ನು ಕೆಸರೂರಿನ ಸಮಾಜ ತೊರೆಯ ಬೇಕಾದ ಅಗತ್ಯ ಜಾತ್ಯತೀತ ಸೃಷ್ಟಿಯ ತುಡಿತಗಳು ಪ್ರಧಾನವಾಗಿವೆ.

"ಕಥೆಯನ್ನು ಹೇಳುವ ಜಯರಾಂ ಸ್ವಾತಂತ್ರ್ಯದ ಭ್ರಮೆಯಲ್ಲಿ ನಾವು ಪರಿಸರ ಮತ್ತು ಸನ್ನಿವೇಶಗಳ ವಿಧಿನಿಯಮಗಳ ಪ್ರಕಾರನೇ ವರ್ತಿಸುತ್ತೇವೆ. ಕತೆಯಲ್ಲೂ ಹಾಗೇ ಒಂದು ಕತೆಯ ಕೊನೆಯನ್ನು ನೀನು ಬದಲಾಯಿಸಬೇಕಾಗಿ ಬಂದರೂ ಅದನ್ನು ಮೊದಲಿನಿಂದಲೂ ತಿದ್ದ ಬೇಕಾಗುತ್ತವೆ".ಮನುಷ್ಯನಿಗೆ ಸ್ವಾತಂತ್ರ್ಯ ಎಂಬುದು ಬಹು ಮುಖ್ಯವಾದ ಅಂಶವಾಗಿರುತ್ತದೆ. ಆದರೆ ಸ್ವಾತಂತ್ರ್ಯ ಎಂದು ಬೀಗುವ ಮನುಷ್ಯನ ಮೇಲೆ ಅಮೂರ್ತವಾದ ಕೈ ಚಳಕಗಳು ನಡೆದು. ಕೃತಿಯಲ್ಲಿ ಈ ಅಂಶಗಳು ಮುಖ್ಯವಾಗುತ್ತದೆ.

- ಗೊತ್ತಿಲ್ಲದಂತೆ ನಾವು ಯಾವುದರೋ ಬಲೆಯಲ್ಲಿ ಸಿಕ್ಕಾಕಿಕೋತ ಇದೀವಲಯ್ಯ.
- ಬ್ಯಾರಿ ಹಣ ಧರ್ಮ ರಾಜಕೀಯಗಳನ್ನೆಲ್ಲಾ ಒಂದರೊಳಗೊಂದು ಸೇರಿಸಿ ಬಲವರ್ಧನೆ ಮಾಡಿಕೊಳ್ಳ ತೊಡಗಿದೆ
- ತಮಗೇ ಗೊತ್ತಿಲ್ಲದಂತೆ ನಾವು ಕೆಸರೂರಿನ ಸಮಾಜದ ಮರ್ಮಕ್ಕೆ ತಾಗುವಂಥ ಏನೋ ಕೆಲಸ ಮಾಡಿದ್ದೇವೆ ಎಂದು. ಪರಿಸರ ಮತ್ತು ಸನ್ನಿವೇಶಗಳ ಮೂಲಕ ವ್ಯಕ್ತಿಯೂ ಬಂದಿತನಾಗುತ್ತಾನೆ. ಅಲ್ಲಿಂದ ವ್ಯಕ್ತಿ ತಪ್ಪಿಸಿಕೊಳ್ಳ ಬೇಕಾದರೆ ತಾನು ಇರುವ ಪರಿಸರ ಸನ್ನಿವೇಶಗಳನ್ನೇ ಬದಲಾಯಿಸ ಬೇಕಾಗುತ್ತದೆ. ಬಿಡಿಸಲಾಗದ ಪರಿಸರದ ಸನ್ನಿವೇಶಗಳು ಒಂದರ ಜೊತೆಯಲ್ಲಿ ಮತ್ತೊಂದು ಸಂದರ್ಭಗಳ ಸಂಯೋಗದಿಂದ ಬಿಡಿಸಲಾಗದ ಪರಿಸರದ ಸನ್ನಿವೇಶಗಳು ಬದಲಾಗುವಿಕೆ ಎಂಬುದು ಸಾಧ್ಯವಾಗದ ಮಾತಗುತ್ತದೆ ಆದ್ದರಿಂದ ಪರಿಸರದಲ್ಲಿ ಸಂದರ್ಭಗಳ ಆಗುವಿಕೆಯನ್ನು ತಡೆಯಬೇಕಾದ. ಅಂಶಗಳು ಈ ರೀತಿಯಾಗಿವೆ.

- ಸಂಪೂರ್ಣ ಆ ಪರಿಸರವನ್ನೇ ನಾಶಮಾಡಬೇಕು.

- ಆಲೋಚನೆಗಳ ತೀವ್ರತೆ ಕಡಿಮೆ ಮಾಡಬೇಕು.

ಆದರೆ ಆಲೋಚನೆಗಳ ತೀವ್ರತೆಯನ್ನು ಪರಿಸರಕ್ಕೆ ಅನ್ವಯಿಸಿ ನಾಶ ಮಾಡುವುದು ಅಂದರೆ ಅದು ಕನಸ್ಸಿನ ಮಾತು ಆಗುತ್ತದೆ. ಆದರಿಂದಲೇ ಆ ಪರಿಸರವನ್ನು ನಾಶಮಾಡುವುದು ಒಳಿತಾಗಿ, ಕಾಣುತ್ತದೆ. 'ಚಿದಂಬರ ರಹಸ್ಯ'ದಲ್ಲಿ ಕೊನೆಯ ಹಂತಕ್ಕೆ ಆ ಪರಿಸರವೇ ನಾಶವಾಗುವುದನ್ನು ಕಾಣಬಹುದಾಗಿದೆ. ತೇಜಸ್ವಿ ಅವರ ಕಥಾ ಜಗತ್ತಿನಲ್ಲಿ ಭೂತದಿಂದ ಬಿಡಿಸಿ ಕೊಳ್ಳುವ ಆಶಯವೇ ಪ್ರಧಾನವಾಗಿ ಕಾಣುತ್ತದೆ ಆದ್ದರಿಂದಲೇ ಪಾರಂಪರಿಕ ಜಗತ್ತು ಸೃಷ್ಟಿಸುವ ಹಿಂಸೆಯ ಅನುಭವವೇ ಕೇಂದ್ರದಲ್ಲಿ ಇರುವುದನ್ನು ಕಾಣಬಹುದಾಗಿದೆ. ಸಾಂಪ್ರದಾಯಿಕ ಸಮಾಜ ಕುರಿತು ಮುಖ್ಯವಾಗಿ ಜಾತಿ ಕೇಂದ್ರಿತ ಸಮಾಜ ಕುರಿತ ಲೋಹಿಯಾ ಗ್ರಹಿಕೆಗಳು ತೇಜಸ್ವಿಯವರ ಕಥಾ ಜಗತ್ತುಗಳ ತಾಂತ್ರಿಕ ನೆಲೆಗಳನ್ನು ರೂಪಿಸಿದೆ. ಮಾನವನ ಘನತೆಯನ್ನು ಸೃಜನಶೀಲತೆಯನ್ನು ಜಾತಿಕೇಂದ್ರಿತವಾದ ಆಲೋಚನೆ ನಾಶಮಾಡುತ್ತಿದೆ. ಆದ್ದರಿಂದಲೇ ರಫಿ ಜಯಂತಿಯರ ಜಾತಿ ಧರ್ಮಗಳನ್ನು ಮೀರಿದ ಪ್ರೇಮವನ್ನು ವಿನಾಶದ ಸಂಕೇತವಾಗಿ ವಿವರಿಸುತ್ತಾನೆ. ಆದರೆ ಜೋಗಿಹಾಳರ ಮರಣದ ದಂತ ಕತೆಗಳು ಕಥೆಗಳಾಗಿ ಎಲ್ಲರ ಬಾಯಿಲ್ಲಿಯೂ ಇದೆ ಅವರ ಸಾವಿಗೆ ಕಥೆಗಳನ್ನು ಕಟ್ಟಿ ಹೀಗಾಗಿರಬಹುದು ಎಂದು ಹೇಳಿಕೊಳ್ಳುತ್ತಿದ್ದಾರೆ ಅವರಿವರ, ದೃಷ್ಟಿಕೋನಕ್ಕೆ, ಕಲ್ಪನೆಗಳಿಗೆ, ಮೀರಿ ಮಾತನಾಡುವುದನ್ನು ಕೃತಿ ಅರಗಿಸಿಕೊಂಡಿದೆ.

ಹೀಗೆ ಹಲವು ಧ್ವನಿಗಳನ್ನು ಸೇರಿಸಿಕೊಂಡು ಅನಾವರಣವಾಗಿರುವ ಕೃತಿ

☺ ಒಂದು ಕಡೆ ಮತೀಯವಾದ, ಕೋಮುವಾದದ ಸ್ವರೂಪದ ಧ್ವನಿಯನ್ನು ರಚನೆಗೆ ಒಳಪಡಿಸಿಕೊಂಡತೆ ಬಿಡಿಸಲಾಗದ ಜೋಗಿಹಾಳರ ಮರಣ ಹಾಗೂ ಮರಣಕ್ಕೆ ಕಾರಣ ಹುಡುಕುವುದಕ್ಕೆ ಸಾಧ್ಯವಾಗದಂತೆ ರಚನೆಯಾ ವ್ಯೂಹ ರಚಿಸಿಕೊಂಡಿರುವುದು.

☺ ಸುಲೇಮಾನ್ ಬ್ಯಾರಿಯ ಹಣ ಹಾಗೂ ಭ್ರಷ್ಟ ರಾಜಕೀಯ ವ್ಯವಸ್ಥೆ

☺ ನಾಶ ವಾಗುತ್ತಿರುವ ಪರಿಸರ ಮಾನವ 'ನಿರ್ಮಿಸಿ'ಕೊಂಡ ಪರಿಸರಗಳ ಅವನತಿಗೆ ಒಳಗಾಗುವುದಕ್ಕೆ ಸಿದ್ಧತೆ ಮಾಡಿಕೊಂಡಿರುವುದು.

☺ ಏಲಕ್ಕಿ ಗಿಡಗಳ ಮೂಲಕ ಅಲ್ಲಿನ ಸಂಸ್ಕೃತಿ ನಾಶವಾಗುತ್ತಿರುವುದನ್ನು ಗುರ್ತಿಸಲಾಗಿದೆ.

☺ ಕೊನೆಗೆ ಸಮಾಜವೇ ವಿನಾಶವಾಗುವುದರ ಕಡೆಗೆ ಚಲಿಸುವ ವಸ್ತುವನ್ನು ಈ ಕಾದಂಬರಿ ನಿರ್ವಹಿಸಿದೆ.

ಹಲವು ವಸ್ತುಗಳನ್ನು ಒಂದಕ್ಕೆ ಮತ್ತೊಂದು ಪೂರಕವಾಗಿ ರಚನೆಯನ್ನು ನಿರ್ವಹಿಸುತ್ತದೆ. ಒಟ್ಟಿನಲ್ಲಿ ಕೆಸರೂರಿನ ಅವನತಿಯ ಕಡೆಗೆ ಚಲಿಸುವ ಹಲವು ಶಕ್ತಿಗಳ ಮುಖಗಳನ್ನು ಪರಿಚಯಿಸುವುದರ ಮೂಲಕವೇ ಸಂಪೂರ್ಣ ಹೊಗೆಯಾಡಿದ ಅಲ್ಲಿನ ಪರಿಸರ ಸಂಪೂರ್ಣ ರೋಗಗ್ರಸ್ಥವಾಗಿ ಮತ್ತೆ ಅಂತಹ ಸಮಾಜ ರಚನೆಗೆ ಬಾರದ ಹಾಗೆ ಕ್ರಾಂತಿಯ ವಿಷಯವಾದ ಜಾತಿಯ ಕಟ್ಟಳೆಯನ್ನು ಮೀರಿ ಜೇನು ಕಲ್ಲಿನ ಗುಡ್ಡದ ಮೇಲೆ ಹೋಗುವ ಪ್ರೇಮಿಗಳ ಕಥೆಯನ್ನು ಈ ಕೃತಿ ಅನಾವರಣ ಮಾಡಿದೆ , ಅಲ್ಲಿಗೆ ರೋಗಗ್ರಸ್ಥವಾದ ಸಮಾಜ ಮತ್ತು ಬದುಕು ಸತ್ತು ಮತ್ತೇ ಹೊಸದಾದ ಜಗತ್ತು ನಿರ್ವಾಣವಾಗುವ ಸಾಧ್ಯತೆಯ ಚಿತ್ರಣಗಳು ಕೃತಿಯಲ್ಲಿ ಚಿತ್ರಿತವಾಗಿದೆ.

ಸಮಾಜದಲ್ಲಿನ ಜನರ ಜೀವನ ವಿಧಾನವನ್ನು ತಿಳಿಯಲು ಬೇಕಾದ ವಾತಾವರಣವೆಂದರೆ ಅವರ ಆಲೋಚನೆಯ ಕ್ರಮಗಳು ಏಕೆಂದರೆ ಒಬ್ಬ ವ್ಯಕ್ತಿ ಯಾವುದಾದರು ಒಂದು ವಿಚಾರವಾಗಿ ಮಾತನಾಡುತ್ತಿದ್ದಾನೆ ಎಂದರೆ ಅವನ ಮಾತಿನ ಕ್ರಮ ಅವನ ಸಂಸ್ಕೃತಿಯನ್ನು ಹೇಳುತ್ತದೆ. ಅಷ್ಟೇ ಅಲ್ಲದೆ ಮಾತೇ ಅವನ ವ್ಯಕ್ತಿತ್ವವನ್ನು ಅಳೆಯುತ್ತದೆ. ಅಷ್ಟೇ ಅಲ್ಲದೆ ಹಲವು ಸಂದರ್ಭಗಳು ವ್ಯಕ್ತಿಯ ವ್ಯಕ್ತಿತ್ವವನ್ನು ಬದಲಾಯಿಸುತ್ತವೆ. ಏಕೆಂದರೆ ಸಂದರ್ಭಗಳು ವ್ಯಕ್ತಿಗೆ ಅನುಕೂಲವಾಗದಿದ್ದಾಗ ಆ ಸಂರ್ಧದ 'ನಿಜಾಂಶವನ್ನು ವ್ಯಕ್ತಿ ಬೇರೆಯವರ ಬಳಿ ವಿವರಿಸುತ್ತಾನೆ ಅವನ ವರ್ತನೆ, ಮಾತು, ಅವುಗಳನು ನಿರ್ಧರಿಸಿ ಹೇಳುತ್ತವೆ. ಇಲ್ಲಿ ಪಾಟೀಲರವರ ವರ್ತನೆಯಲ್ಲಿ ಆದ ಬದಲಾವಣೆ ತನ್ನ ವರ್ಗದ ನಡುವೆ ಇರುವ ವಿಜ್ಞಾನಿಗಳ ವರ್ತನೆ ಹೇಗಿದೆ ಎಂಬುದನ್ನು ತಿಳಿಸುತ್ತದೆ, ಸಂಶೋಧನ ಕೇಂದ್ರದ ಸಮೀಪದ ಮಸೀದಿಯಿಂದ ಅಲ್ಲಾ ಹೋ ಅಕ್ಬರಲ್ಲಾ ಎಂದು ಮುಸ್ಲಿಂಮರ ಪ್ರಾರ್ಥನೆ ಮೊಳಗತೊಡಗಿತು. ಅದಕ್ಕೆ ಹೊಂದಿಕೊಂಡಂತೆ ಉತ್ತಿಷ್ಠೋ ಉತ್ತಿಷ್ಠ ಅಂತ ಸಂಶೋಧನ ಕೇಂದ್ರದ ದೇವಸ್ಥಾನದಿಂದ ಒಂದು ಮೈಕು ಅಬ್ಬರಿಸಿ ಕೂಗುತ್ತ ತಿರುಪತಿ ವೆಂಕಟೇಶ್ವರನನ್ನು ತಿಳಿಸ ತೊಡಗಿತು. ಧರ್ಮಗಳು ಜಾಗೃತವಾಗಿರುವುದನ್ನು ಕಂಡು ಹಿಂದುಗಳೂ ಮುಸ್ಲಿಂಮರೂ ನೆಮ್ಮದಿಯ ನಿಟ್ಟುಸಿರು ಬಿಡುತ್ತಾ ವಿರೋಧಿ ಮೈಕುಗಳ ಕಡೆಗೆ ಹಲ್ಲು ಕಡಿದರು. ಅಷ್ಟೇ ಅಲ್ಲದೆ ವೈಚಾರಿಕತೆಯನ್ನು ಮೈಗೂಡಿಸಿಕೊಂಡ ವಿಜ್ಞಾನಿಗಳು ಮಧ್ಯಾಹ್ನದ ಹೊತ್ತಿನಲ್ಲಿ ಉತ್ತಿಷ್ಠೋ ಉತ್ತಿಷ್ಠ ಅಂತ ತಿರುಪತಿ ವೆಂಕಟರಮಣನ್ನ ಎಬ್ಬಿಸ್ತಿದ್ದಾರೆ, ಏನಯ್ಯ ಹೆಗ್ಡೆ, ಮಹಮದ್ ನೀವಿಬ್ರೂ ನಿಮ್ಮ ನಿಮ್ಮೋರಿಗೆ ಕೊಂಚ ಹೇಳಬಾರ್ದೇ ನಯ್ಯಾ"? ಎಂದು ಗಲಭೆ ತಾಳಲಾರದೆ ಪಾಟೀಲರು ತಲೆ ಮೇಲೆ ಕೈ ಹೊತ್ತು ಕುಳಿತರು

ಹೀಗೆ ಒಂದು ಧರ್ಮದ ಮೇಲಿನ ಪೈಪೋಟಿ ಮತ್ತೊಂದು ಧರ್ಮದ ಕಡೆಗೂ ಚಲಿಸುತ್ತದೆ. 'ಅವರು' ಹಾಡಿದ್ದಾರೆಂದರೆ 'ನಾವು' ಹಾಡಬೇಕು. ಅವರ ಮೈಕಲ್ಲಿ ಶಬ್ದ ಜೋರಾಗಿ ಕೇಳಿಸಿಕೊಂಡರೆ ನಮ್ಮಲ್ಲಿ ಅದಕ್ಕಿಂತ ಹೆಚ್ಚು ಹೀಗೆ ಕೋಮುಗಳ ನಡುವಿನ ಈ ವಿಚಾರಗಳು

ಅವರವರ ಮಾನಸಿಕ ಲೋಕದ ವಿವರಗಳನ್ನು ವ್ಯಕ್ತಪಡಿಸುತ್ತವೆ. ಡಾ॥ ಪಾಟೀಲ್ ರವರು ಆ ಸಂದರ್ಭಕ್ಕೆ ತೀರ ಭಿನ್ನವಾಗಿದ್ದು ಈ ಶಬ್ದದ ಗಲಾಟೆ ಬೇಡ ಎಂದು ಅವರ ಮನಸ್ಸು ವರ್ತಿಸುತ್ತಿದೆ. ಏಕೆಂದರೆ ಆ ಸ್ಥಳೀಯತೆಯಲ್ಲಿರುವ ಭ್ರಷ್ಟಚಾರ. ಗೋಸುಂಬೆ ತನ ಸ್ವಾರ್ಥ ಈ ವಿಚಾರಗಳಲ್ಲಿ ಯಾರಿಗೆ ಯಾರು ಕಡಿಮೆ ಇಲ್ಲದ, ಎತ್ತಿ ಕಟ್ಟುವ, ಗಲಾಟೆಗೆ ದಾರಿ ಮಾಡಿ ಕೊಡುವ ವಾತಾವರಣವನ್ನು ನೋಡಿ ನೋಡಿ ಹೇಸಿಗೆಯಾದ ಪಾಟೀಲ್‌ರವರು ಆ ಪರಿಸರದಿಂದ ಬೇರೆಯಾಗಿರುತ್ತಾರೆ ಆದರೆ ಅಲ್ಲಿನ ಅವರನ್ನು ಜನ ಮಂತ್ರ–ತಂತ್ರ ಮಾಡುವವರ ಪಟ್ಟಕ್ಕೇರಿಸುತ್ತಾರೆ. ಅವರಲ್ಲಿರುವ ಬೌದ್ಧಿಕತೆಯನ್ನು ಸರಿಯಾಗಿ ಸಮರ್ಪಕವಾಗಿ ಅರ್ಥೈಸಿ ಕೊಳ್ಳದ ಜನ ಅವರನ್ನು ಅವರ ಪರಿಸರದಿಂದ ವಿಭಿನ್ನವಾಗಿಯೇ ನೋಡುತ್ತಾರೆ. ಅಂದರೆ ಸಂಪೂರ್ಣವಾಗಿ ಪಾರಂಪರಿಕ ಲೋಕದ ಮೂಲಕ ಅವರನ್ನು ಮಂತ್ರವಾದಿಯಾಗಿಯೇ ಗುರ್ತಿಸಿರುವುದು ಗಮನಿಸಬಹುದಾಗಿದೆ.

ಸುಲೇಮಾನ್ ಯೂಸುಫ್ ಬ್ಯಾರಿ ಕೆಸರೂರಿಗೆ ಆಗಮಿಸಿದ್ದು ಒಣಮೀನು ಮಾರಾಟ ಮಾಡಲು ಆತ ಕೆಲವೇ ವರ್ಷಗಳಲ್ಲಿ ಕೆಸರೂರಿನ ಕೋಟ್ಯಾಧಿಪತಿಯಾಗಿದ್ದು ಮಾತ್ರ ಯಾರಿಗೂ ತಿಳಿಯದ ಸಂಗತಿಯಾಗಿತ್ತು. ಇಲ್ಲಿ ಬ್ಯಾರಿ ನಿರ್ವಹಿಸಲಾದ ರಾಜಕೀಯ ಸ್ಥಿತಿ ಅಥವ ವ್ಯವಸ್ಥೆ ಅಲ್ಲಿನ ಜನ ಜೀವನದಲ್ಲಿ ಎಲ್ಲಾರು ಒಂದೊಂದು ರೀತಿಯಲ್ಲಿ ನಷ್ಟಕ್ಕೆ ಒಳಗಾಗುತ್ತಲೇ ಬರುತ್ತಿದ್ದರೂ ಆದರೆ ಅಲ್ಲಿನ ಜನತೆಗೆ ಅದು ಮೊದಲು ಅರಿವಿಗೆ ಬರಲಿಲ್ಲ, ನಿಧಾನಕ್ಕೆ ಅರಿವಿಗೆ ಬಂದರು ಪ್ರಯೋಜನವಾಗಲಿಲ್ಲ. ಬ್ಯಾರಿ ಮಾಡಿದ ಕಳ್ಳಸಾಗಣೆ, ಹೊಸ ವ್ಯಾಪಾರ ಹಾಗೂ ಕೆಸರೂರಿನಲ್ಲಿ ಏಲಕ್ಕಿ ಮಂಡಿ ತೆರೆದು ಅವನೇ ಕೊಂಡು ನೇರ ರಫ್ತು ವ್ಯಾಪರಕ್ಕೆ ಇಳಿಯುವುದು ಆದರೆ ಕೃಷ್ಣೇಗೌಡನಿಗೆ ಸುಲೇಮಾನ್ ಬ್ಯಾರಿಯ ಜೊತೆ ಪೈಪೋಟಿ ನಡೆಸುವುದು ಸಾಧ್ಯವಿರಲಿಲ್ಲ.

"ಸುಲೇಮಾನ್ ಬೇರಿ ಹೋದ ಹೋದಲ್ಲೆಲ್ಲಾ ತನ್ನ ಕಡೆಯ ಜನಗಳಿಗೆ ಕೆಲಸ ಕೊಡುತ್ತಿದ್ದ. ಇದು ಬೇರಿ ಮಾಡಿತ್ತಿದ್ದ ರಾಜಕೀಯ ಕುತಂತ್ರ ಎಲ್ಲೆಲ್ಲಿ ಇದ್ದಿಲು ಮಾಡಲು ಅರಣ್ಯದ ಕೂಪು ಮಾಡಲಿ ಅಲ್ಲೆಲ್ಲಿ ನೂರಾರು ಕೇರಳ ಬೇರಿಗಳು ಬಂದು ಬೀಡು ಬಿಡುತ್ತಿದ್ದರು ಅವರು ಹಾಕಿದ ವಠಾರದ ಜಾಗಗಳನ್ನೆಲ್ಲಾ ಸುಲ್ಲೇಮಾನ್ ಬೇರಿ ತಹಶೀಲ್ದಾರರು ರೆವಿನ್ಯೂ ಇನ್‌ಸ್ಪೆಕ್ಟರು ಸರ್ವೇಯವರು ಇವರನ್ನೆಲ್ಲಾ ಹಿಡಿದು ಲಂಚದ ಬುಟ್ಟಿಗೆ ಬೀಳಿಸಿ ಅವರಿಗೇ ಮಂಜೂರಾಗುವಂತೆ ಮಾಡುತ್ತಿದ್ದ. ಕೆಸರೂರಿನ ಮಸೀದಿಗಳೆದ್ದು ಮೈಕುಗಳ ಕೂಗಾಟ ಆರಂಭವಾದೊಡನೆ ಸುಲೇಮಾನ್ ಬೇರಿಯ ಉದ್ದೇಶ ಅರ್ಥವಾಗ ತೊಡಗಿತು. ಬೇರಿ ಹಣ ಧರ್ಮ ರಾಜಕೀಯಗಳನ್ನೆಲ್ಲಾ ಒಂದರೊಳಗೊಂದು ಸೇರಿಸಿ ಬಲವರ್ಧನೆ ಮಾಡಿ ಕೊಳ್ಳತೊಡಗಿದ. ಇದರ ಮೂಲಕ ಕೆಸರೂರು ನಾಶವಾಗುತ್ತಿತ್ತು. ಕಾಡಿನ ಮೂಲಕ, ಮತಗಳ, ಧರ್ಮಗಳ ಮೂಲಕ ಕೊನೆಗೆ ಜೋಗಿ ಹಾಳರ

ಸಾವಿನ ಮೂಲಕವು ಸಹ" 11 ಇಲ್ಲಿ ಬೇರಿಯ ರಾಜಕೀಯ ಪರಿಜ್ಞಾನ ಕೆಸರೂರನ್ನೇ ಅವನ ಅಧೀನಕ್ಕೆ ತೆಗೆದುಕೊಂಡ ನಿಯಂತ್ರಣದ ನಿರ್ದೇಶನವಿದೆ. ಹೀಗೆ ಅವನಿಗೆ ಬೇಕಾದ ಪರಿಸರ, ವಾತಾವರಣವನ್ನು ನಿರ್ಮಿಸುತ್ತಾನೆ. ಹಣದಿಂದ ಅಧಿಕಾರವನ್ನು ಅಧಿಕಾರಿಯನ್ನು ಕೊಂಡು ಕೊಳ್ಳುವುದರ ಮೂಲಕ ತನ್ನಗೆ ಸೂಕ್ತವಾಗುವ ಹಾಗೆ ಅಧಿಕಾರ + ಅಧಿಕಾರಿಯನ್ನು ಬಳಸಿಕೊಳ್ಳುತ್ತಾನೆ.

ಕಾದಂಬರಿಯ ಲೋಕದಲ್ಲಿ ಬರುವ ಜಯರಾಂ ಕಥೆಯನ್ನು ಮುಂದುವರೆಸಲು ಮುಂದೆ ನಡೆಯ ಬಹುದಾದ ಸಂಗತಿಗಳನ್ನು ವಿವರಿಸುತ್ತಾನೆ. ಮಹಮದ್ ತನ್ನ ಭೀತಿಯನ್ನು ವಿವರಿಸಿದ ನಂತರ ಜಯರಾಂ "ಇನ್ನೊಂದು ವಾಸ್ತವ ತುಣುಕು ಸಿಕ್ಕಿದೆ ಮಿತ್ರರೆ ನನ್ನ ಕತೆ ಇನ್ನೊಂದು ಹೆಜ್ಜೆ ಮುಂದುವರೆಸಿ ಭೂತ ಕಾಲದಿಂದ ತಂದು ವರ್ತಮಾನಕ್ಕೆ ಬಿಡುತ್ತಿದ್ದೇನೆ. ಮೆಜಿಶೀಯನ್ ಮುತ್ತು ಮತ್ತೆ ಯಾಕೆ ಬಂದಿದ್ದಾನೆ? ಅಂಗಾಡಿಯನ್ನು ಕೊಲ್ಲಲಾಗಲೀ ಮಹಮದ್ ಕೊಲ್ಲಲಾಗಲಿ ಅಲ್ಲ. ನನ್ನ ಕತೆ ನಿಜವಾಗಿಯೂ ವಾಸ್ತವಕ್ಕೆ ತೀರ ಹತ್ತಿರಾಗಿ ಸಾಗಿ ಬರುತ್ತಿರೋದು ನಿಜವಾದರೆ ಈ ಸಾರಿ ಅವನ ಗುರಿ ಯಾರು ಗೊತ್ತೆ? ಪ್ರೊಫೆಸರ್ ಪಾಟೀಲ್, ಕೆಸರೂರು ಹೈಬ್ರೀಡಿನ ಚಿದಂಬರ ರಹಸ್ಯ ಪಾಟೀಲರು ಬಿಡಿಸೋದಕ್ಕೆ ಮೊದಲು ಪಾಟೀಲ್‌ರ ಕತೆ ಮುಗಿಯುತ್ತದೆ".

ಸಾಮಾಜಿಕ ಪರಿಸರದ ಹಿಡಿತವನ್ನು ಚಿಂತನೆಯ ಮೂಲಕ ಮೀರುವ ಪ್ರಜ್ಞೆ ವ್ಯಕ್ತಿ ವಿಶಿಷ್ಟತೆಯನ್ನು ಎತ್ತಿ ಹಿಡಿದಿದ್ದಾರೆ. ನೋಡುವ ದೃಷ್ಠಿಕೋನಕ್ಕಿಂತಲೂ ಬದುಕಿನ ಕ್ರಮದಲ್ಲಿಯೆ ಪರಿಸರವನ್ನು ಮೀರಿ ತನ್ನ ನೆಲೆ ಕಂಡು ಕೊಳ್ಳುವ ಪರಿ ಇದೆ. ಪರಿಸರದ ಬಗೆಗಿನ ಕುತೂಹಲ, ಆಸಕ್ತಿಯ ದೃಷ್ಠಿ ವಿಶ್ಲೇಷಣಾತ್ಮಕವಾಗಿ ಬೆಳೆದಿದೆ. ಈಗಾಗಲೇ ಬಹಳಷ್ಟು ಕಡೆ ಚರ್ಚಿತವಾಗಿರುವಂತೆ ಒಂದು ನೈಸರ್ಗಿಕ ಪರಿಸರದ ಮೇಲೆ ಮನುಷ್ಯ ನಡೆಸುವ ಹಲ್ಲೆ ಸಾಮಾಜಿಕ ಪರಿಸರದ ನಾಶಕ್ಕೂ ಕಾರಣವಾಗುತ್ತಿರುತ್ತದೆ. ಆದರೆ ತೆಜಸ್ವಿಯವರ ದೃಷ್ಠಿ ಮನುಷ್ಯ ಭೌತಿಕ ಪರಿಸರದ ಮೇಲೆ ನಡೆಸುವ ಹಲ್ಲೆಯ ಹಿಂದಿರುವ ಅವನ ಮಾನಸಿಕ ಸ್ಥಿತಿಯ ಕಡೆಗೂ ಹರಿದಿದೆ.

ಪರಿಸರದ ನಾಶ ಮತ್ತು ಸಮಾಜದ ಅವನತಿ ಪರಸ್ಪರ ಸಂಬಂದ ಪಡೆದ ಹಿನ್ನಲೆಯಲ್ಲಿ ಚರ್ಚಿತವಾಗಿರುತ್ತದೆ. ಕೆಸರೂರು ಥೈಲಿಗಟ್ಟಲೆ ಹಣತರುವ ಕಾಡನ್ನು ಕಡಿದು ಬೇರಿಯಿಂದ ಹಣದಾಸೆಗೆ ಈಡಾಗಿ ಆ ಜಾಗವೆಲ್ಲಾ ಲಂಟಾನ ಮಯವಾಯಿತು.

ಇದರೊಡನೆ ಆ ಊರಿನಲ್ಲಿ ಬಂದು ಬದುಕನ್ನು ಆರಂಭಿಸುವವರಿಗೆ ಒಂದು ಭಯಾನಕ ಕೊರತೆಯ ಅನುಭವವನ್ನು ತಂದು ಕೊಡುತ್ತದೆ. ಅದು ಕೆಸರೂರಿನ ಸಂಸ್ಕೃತಿಗೆ ಹಿಡಿದಿರುವ ಶಾಪವಾಗಿ ಕಾಣಿಸುತ್ತದೆ. ಈ ಶಾಪವನ್ನು ತೇಜಸ್ವಿ ವಿವರಿಸುವುದು. ಇಂತಹ ಸಂಸ್ಕೃತಿಗೆ ಕಾರಣವಾಗುತ್ತಿರುವ ಅಲ್ಲಿನ ಜನರು ಕುಸಿಯುತ್ತಿರುವ ಮನಸ್ಸುಗಳು ಇಂತಹದ್ದೊಂದು ವಿನಾಶಕ್ಕೆ ಕಾರಣವಾಗುತ್ತಿರುವ ಪ್ರಕೃತಿಯ ಪ್ರಯೋಗ ಶೀಲತೆ. ಮನಸ್ಸಿನಾಳದ ಸ್ವಾರ್ಥದಲ್ಲಿ ಆಕ್ರಮಣ ಶೀಲತೆಯಲ್ಲಿ ಗುರ್ತಿಸುತ್ತಾರೆ. ಸುತ್ತಲಿನ ಪರಿಸರದ ಮೇಲೆ ಹತೋಟಿ ಹೊಂದುವ ಹಂತದಲ್ಲಿ ತನ್ನೊಳಗಿನ ಸಹಜತೆಯನ್ನೇ ಕೊಂದು ಕೊಳ್ಳುತ್ತಿರುವವರ ದುರಂತ ಇದಾಗಿದೆ. ಅವನೊಳಗಿನ ಸಹಜ ತೃಪ್ತಿ, ಶಾಂತಿ, ನೆಮ್ಮದಿಗಳಿಗೆ ಬದಲಾಗಿ ಅಮಾನುಷವಾದ ಅಮಾನವೀಯತೆಯನ್ನು ಈ ಮೂಲಕ ಹುಟ್ಟಿ ಹಾಕಿಕೊಳ್ಳುತ್ತಿದ್ದಾನೆ.

ಈ ಅಸಹಜತೆಗೆ ಈಡಾಗುವಂತೆ ಪ್ರಕೃತಿಯ ಆಮಿಷವನ್ನು ಒಡ್ಡಿ ಮನುಷ್ಯನ ಅಸ್ತಿತ್ವವನ್ನೇ ಪ್ರಯೋಗಕ್ಕೆ ಒಡ್ಡುತ್ತಿದೆಯೊ ಎಂಬ ಪ್ರಶ್ನೆ. ಅದಕ್ಕೆ ಪಾಟೀಲರು ಹೇಳುವಂತೆ "ಈಗಾಗಲೇ ಪ್ರಕೃತಿ ಎಷ್ಟೊಂದು ಪ್ರಯೋಗ ಮಾಡಿದೆಯಯ್ಯ, ಇಲ್ಲಿ ನಾವು ಬದುಕೋಕ್ಕೆ ನಾಲಾಯಖ್ ಅಂತನ್ನಿಸಿದರೆ ನಾವೂ ಇಲ್ಲಿಂದ ನಿರ್ಗಮಿಸ್ತೀವಿ. ನಾಮಾವಶೇಷ ಆಗ್ತೀವಿ ಆದರೆ ನಿಧಾನವಾಗಿ ಪ್ರಕೃತಿ ಇನ್ನೊಂದು ತರದ ಪ್ರಯೋಗಕ್ಕೆ ಕೈ ಹಾಕ್ತದೆ. ಮತ್ತೆ ಭೂ ಮಂಡಲ ಸ್ಮಶಾನದಿಂದಲ್ಲೇ ಇನ್ನೇನ್ನೋ ಒಂದು ಚೈತನ್ಯ ಚಿಮ್ಮುತೆ ಅಷ್ಟೇ. ಪರಿಸರದ ಮೇಲೆ ಸವಾರಿ ಮಾಡಲೆತ್ನಿಸುತ್ತಿರುವ ಮನುಷ್ಯನ ಪ್ರಜ್ಞೆಯೂ ಪೂರ್ವ ನಿಯೋಜಿತವಾದದ್ದೆ ಎಂಬ ಪ್ರಶ್ನೆ ಉದ್ದಕ್ಕೂ ಚರ್ಚಿಸಲ್ಪಟ್ಟಿದೆ. ವ್ಯಕ್ತಿ ಮತ್ತು ಸಮಾಜದಿಂದ ಕ್ರಮೇಣ ವ್ಯಕ್ತಿ ಮತ್ತು ಅಖಂಡ ಜಗತ್ತು ಮುಖಾಮುಖಿಯಾಗಿ ಮೂರ್ತತೆಯಿಂದ ಅಮೂರ್ತತೆಯ ಕಡೆಗೆ ಹೊರಳುತ್ತದೆ. ಅಂತೆಯೆ ಬರವಣಿಗೆಯ ಚಿಂತನೆಯ ಆಳವನ್ನು ಪ್ರವೇಶಿಸುತ್ತಾ ಹೆಚ್ಚು ಸಂಕೀರ್ಣವೂ ಮತ್ತು ಸಂಕೇತಾತ್ಮಕವೂ ಆಗುತ್ತಾ ಹೋಗುತ್ತದೆ.

'ಚಿದಂಬರ ರಹಸ್ಯದಲ್ಲಿ' ಸಾಕ್ಷೀಪ್ರಜ್ಞೆಯ ಮಾದರಿಯಲ್ಲಿ ನಿರೂಪಣೆ ಇದ್ದರೂ, ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವ ರೀತಿ ವರ್ತಮಾನದಲ್ಲಿನ ಸ್ಥಿತಿಯ ಹಿಂದಿನ ಕಾರಣಗಳ ಹುಡುಕಾಟವಾಗಿ ಮತ್ತು ಹೀಗೆ ಹುಡುಕುತ್ತಿರುವ ಮನುಷ್ಯ ಪ್ರಜ್ಞೆ ಎಷ್ಟರ ಮಟ್ಟಿಗೆ ಸ್ವತಂತ್ರವಾದದ್ದು ಎಂದು ವಾಸ್ತವವನ್ನು ಬಗೆದು ನೋಡುವ ಪರಿ ಕಾಣಿಸುತ್ತದೆ. ಇಲ್ಲಿ ತಾತ್ವಿಕತೆಯ ಅನ್ವೇಷಣೆಯನ್ನು ಪ್ರಾಯೋಗಿಕವಾಗಿ ನೋಡುವ ಸಾಹಸ ಮಾಡುತ್ತಿರುವಂತೆಯೇ, ಇನ್ನೊಂದು ನೆಲೆಯಲ್ಲಿ ವರ್ತಮಾನದ ಸ್ಥಿತಿಗತಿಗಳ ಹಿನ್ನಲೆಯಲ್ಲಿರುವ ವಾಸ್ತವವೇನು ಎಂಬುದು ಕುತೂಹಲಕರ ಮಾತ್ರವೇ ಅಲ್ಲ ಅದು ಒಂದು ಬದುಕಿನ ಸಮಾಜದ ಅಳಿವು-ಉಳಿವಿನ ಪ್ರಶ್ನೆಯಾಗಿ ಹುಡುಕಲ್ಪಡುತ್ತದೆ.

ವಾಸ್ತವವಾದಿ ಬರವಣಿಗೆಯು ವಾಸ್ತವತೆಯನ್ನು ಘಟನೆ ಘಟನೆಗಳಲ್ಲಿ ಅದರ ಹಿಂದಿರುವ ಸತ್ಯವನ್ನು ಮತ್ತು ಘಟನೆಗಳು ಒಂದಕ್ಕೊಂದು ತಳುಕು ಹಾಕಿಕೊಂಡು ಸೃಷ್ಟಿಸುವ ಹೊಸ ಬದುಕನ್ನು ಅರ್ಥೈಸಿಕೊಳ್ಳುತ್ತದೆಯೇ ಹೊರೆತು, ಇದು ಹೀಗೆಯೇ ಎಂಬ ತಿರ್ಮಾನ ಕೊಡುವುದಿಲ್ಲ. ತೇಜಸ್ವಿ ವೈಚಾರಿಕತೆಯಲ್ಲಿಯೇ ಬದುಕನ್ನು ಅರ್ಥೈಸಿಕೊಳ್ಳಲು ತಾತ್ವಿಕ ಮಾನದಂಡಗಳನ್ನು ಬಳಸಿದವರು, ಕ್ರಮೇಣ ಅಂತಹ ತಾತ್ವಿಕ ಅನ್ವೇಷಣೆಯನ್ನು ಸ್ವಲ್ಪ ಮಟ್ಟಿಗೆ 'ಚಿದಂಬರ ರಹಸ್ಯ'ದಲ್ಲಿ ಮುಂದುವರೆಸಿದ್ದಾರೆ.

" ಸಾಮಾಜಿಕ ಪರಿಸರ/ ಸಮಸ್ಯೆಗಳನ್ನ ಪರಿಹರಿಸಿದರೆ ಸಾಕು. ಆದರೆ ಕೆಲವು ಸಾರಿ ಸಮಸ್ಯೆಗಳು ವಿಪರೀತ ಸಂಕೀರ್ಣವಾಗಿ ಇಡೀ ಒಂದು ಊರಿನ ಸಮುದಾಯವೇ ಹಿಡಿದುಕೊಂಡಿರುತ್ತದೆ. ಆವಾಗಲೇ ನಾನು ಹೇಳಿದ ಹಾಗೆ "ಬ್ಲಡಿ ನ್ಯೂಸೆನ್ಸ್" ಆಗೋದು ಒಂದೊಂದು ಇಂಥ ಅತಿಮಾನುಷ" ಕೆಸರೂರಿನ ವಿವಿಧ ಸಮಸ್ಯೆಗಳು ಸೇರಿ ಆ ಊರಿನ ವಿನಾಶಕ್ಕೆ ಕೀಚಕನ ಆಗಮನವಾಗಿದೆ. ಅವನೆ "ತಮ್ಮನ ಗೌಡನೂ ಬ್ಯಾಂಕ್ ಕಾರ್ಯದರ್ಶಿ ರಾಮಾಚಾರಿಯೂ ಕರಟಕ ದಮನಕರೆಂದು ಪ್ರಖ್ಯಾತಿಯಾಗಿದ್ದರು. ರಾಮಾಚಾರಿ ಯಾವತ್ತೂ ಹರಿಜನರ ಕೇರಿಗೆ ಹೋದವನೇ ಅಲ್ಲ. ಆದರೆ ಹರಿಜನರೆಲ್ಲಾ ಸಾಬರ ಜಾತಿಗೆ ಸೇರಲು ಮಸಲತ್ತು ಮಾಡಿತ್ತಿದ್ದಾರೆ ಎನ್ನುವ ವದಂತಿ ಇವನ ಕಿವಿಗೆ ಬಿತ್ತು. ಶ್ರೀನಿವಾಸರಾಯ ಸರ್ಕಾರದ ಆದೇಶದ ಮೇಲೆ ಹರಿಜನ ಗಿರಿಜನರಿಗೆ ಸಾಲ ನೀಡಬೇಕೆಂಬ ನಿರ್ಬಂಧಕ್ಕೆ ಬಂದ. ಮೇನೇಜರು ಸಾಲದ ಕಂತು ತೀರಿಸುತ್ತೀರೋ ಇಲ್ಲಾ ಹಂದಿಗಳನ್ನು ಒಯ್ದು ಹರಾಜು ಹಾಕಿಸಲೋ ಎಂದು ಬೆದರಿಸಿದಾಗ ಗಾಬರಿಯಾದ ಹೊಲೆಯರು, ಮತ್ತೊಮ್ಮೆ ಮೇನೇಜರು ಕೇರಿಗೆ ಹೋದಾಗ ನಾವೆಲ್ಲಾ ಸಾಬರ ಜಾತಿಗೆ ಸೇರಬೇಕೆಂದಿದ್ದೇವೆ. ಹಂದಿಗಳನ್ನೆಲ್ಲಾ ಕಾಡಿಗೆ ಓಡಿಸಿ ಬಿಟ್ಟೆವು ಎಂದು ಢೋಂಗಿ ಹೊಡೆದರು ಜಾತಿ ಜಾತಿಗಳನ್ನು ಒಂದರ ಮೇಲೊಂದು ಎತ್ತಿಕಟ್ಟಿ ಬ್ರಾಹ್ಮಣರ ಹಿತಾಸಕ್ತಿ ಕಾಪಾಡುವುದರಲ್ಲಿ ,ಬ್ರಾಹ್ಮಣರ ವಿರುದ್ಧ ಶೂದ್ರರು ಎರಗಿ ಬಿದ್ದಾಗ ಶೋಷಣೆ ಮಾಡುತ್ತಿದ್ದವರು ಒಕ್ಕಲಿಗರು ಲಿಂಗಾಯ್ತರೇ ಎಂದು ಹರಿಜನರನ್ನು ಅವರ ಮೇಲೆ ಎತ್ತಿ ಕಟ್ಟಿದ."

ಕುತಂತ್ರ ಹಾರುವನೂ ಮೂರ್ಖ ಗೌಡನೂ ಹೊಲೆಗೇರಿ ಕಡೆಗೆ ಪಾದ ಬೆಳೆಸಿದ್ದು ಹರಿಜನರಿಗೆ ಕುತೂಹಲ ತಂದಿತು. ಹೊಲೆಯರು "ನಿಮ್ಮ ದೇವಸ್ಥಾನಕ್ಕೆ ನಮ್ಮನ್ನು ಸೇರಿಸ್ಕೋತೀರಾ! ನಿಮ್ಮ ಮನೆ ಒಳಗೆ ನಮ್ಮನು ಬಿಟ್ಕೋತೀರ? ನಮ್ಮನ್ನು ಮುಟ್ಟಿಸ್ಕೋತೀರಾ? ಹೀಗೆ ಮಾತಿಗೆ ಮಾತು ಬೆಳೆದು ಕೊನೆಗೆ "ಉಂಡ ಬಳ್ಳೇಗೆ ಅಂಡು ತಿರುಗಿಸೋ ಜಾತಿ ನೀವು ಇಷ್ಟೂದಿನ ನಾವು ಬೇಕಿತ್ತು. ಈಗ ಆ ದನ ತಿನ್ನೋ ಹಲಾಲುಕೋರರ ಜೊತೆ ನಂಟಸ್ತಿಕೇಗೆ ಹೊರಟಿದ್ದೀರಾ"?

"ತಿಂದ್ರೇನಾತು ನಾವೂ ತಿಂತೀವಿ ಅವ್ರೂ ತಿಂತಾರೆ." ಮಾತಿಗೆ ಮಾತು ಬೆಳೆದು ಜಾತಿಯ ಒಳ ಸೂಕ್ಷ್ಮಗಳನ್ನು ವ್ಯಂಗ್ಯವಾಗಿ ಮಾತನಾಡಿಕೊಳ್ಳುವ ಎರಡು ಧರ್ಮಗಳು ನಾವು ಶ್ರೇಷ್ಠ ಎಂದು ಒಂದು ಧರ್ಮ ಮತ್ತೊಂದು ಧರ್ಮವನ್ನು ಹಿಯಾಳಿಸಿ ಮಾತನಾಡುತ್ತದೆ. ಧರ್ಮದ ಚೌಕಟ್ಟುಗಳನ್ನು ವ್ಯಂಗ್ಯಕ್ಕೆ ತಿರುಗಿಸುತ್ತಾರೆ.

ಒಬ್ಬ "ನೀವು ಹೇಲು ತಿನ್ನಾ ಹಂದಿ ತಿಂತೀರಿ, ಅದು ಮಾತ್ರ ಬಾಳ ರುಚೀನ?"ಎಂದ ತಮ್ಮ ಮಾನಸಿಕ ಲೋಕಕ್ಕೆ ಕೊಡಲಿ ಪೆಟ್ಟು ಕೊಟ್ಟಾಗ ಜಾತಿಯ ನಂಬಿಕೆಗಳಿಗೆ ಆಚಾರಗಳಿಗೆ ದ್ರೋಹವಾದರೆ ಅದು ತನ್ನ ಸಾಮಾಜಿಕ ನೆಮ್ಮದಿಯನ್ನು ಹಾಳು ಮಾಡುವುದರ ಕಡೆಗೆ ಕ್ರಿಯೆ ಇದೆ.

"ಹೊಲೇರ ಹುಡುಗೀರು ಮರ್ಯಾದೇಲಿ ಕೆಲಸ ಮಾಡಿಕೊಂಡು ಗ್ರಾಸ್ತನ ಮಾಡಹಂಗೇ ಇಲ್ಲ"ಎಂದ ಮಗದೊಬ್ಬ. ಹೀಗೆ ದೇಹದ ಅಂಗವೊಂದು ಊನವಾದರೆ ಕೆಟ್ಟರೆ ಅದು ನಿಧಾನಕ್ಕೆ ಹಾಳಾಗುವುದು ಸಾಮಾನ್ಯ ಇದೆ ರೀತಿಯಲ್ಲಿ 'ಚಿದಂಬರ ರಹಸ್ಯ' ಪ್ರಾರಂಭದಿಂದಲ್ಲೇ ಉಂಟಾಗುವ ರಹಸ್ಯದ ಕ್ರಾಂತಿ ಕೊನೆಯಲ್ಲಿ ಕ್ರಾಂತಿಯ ಮೂಲಕವೇ ಅಂತ್ಯವಾಗುತ್ತದೆ.



ಆ ಊರಿನಲ್ಲಿ ಜಾತಿ ಆಧಾರದ ನಂಬಿಕೆಗಳು, ಮತಾಂತರಕ್ಕೆ ಒಡ್ಡಿದ ಸವಾಲುಗಳಿಂದ ಮಾನಸಿಕ ನೆಮ್ಮದಿ ಹಾಳಗುವುದರ ಜೊತೆಗೆ ತಮ್ಮ ದೈಹಿಕ ಹೊಡೆತಗಳು ಮೀರಿ ವರ್ತಿಸುವುದು ಗುರ್ತಿಸಲಾಗಿದೆ. ಏಕೆಂದರೆ ಕೊರೆತೆಗಳೆ ಅಲ್ಲಿನ ಸಮಾಜದ ವಿನಾಶವನ್ನು ಹೇಳುತ್ತಿವೆ. ಸಮಸ್ಯೆಗಳಲ್ಲಿ ಸಮಸ್ಯೆ ಒಂದಾಗಿ ಸೇರಿ ಅಲ್ಲಿನ ಪರಿಸರವನ್ನೇ ಕೊರೆದು ಬಿಡುತ್ತದೆ. ನಿಗೂಢವಾದ ವ್ಯಕ್ತಿತ್ವ ಅರ್ಥವಾಗದ ಪರಿಸರ ಹಾಗೂ ಅದೇ ಪರಿಸರದಿಂದ ರೂಪಿತವಾದ ಮನಸ್ಸುಗಳು ಸಂದರ್ಭಗಳಿಗೆ ವ್ಯಕ್ತಿ ವ್ಯಕ್ತಿಗಳಲ್ಲಿ ಅರ್ಥವಾಗದ ಸಂಭಾಷಣೆ ಇವೆಲ್ಲವೂ ಅಲ್ಲಿನ ಸಮಾಜ ರೂಪಿಸಲಾದ ವ್ಯಕ್ತಿತ್ವವಾದರಿಂದ ವಿನಾಶದ ಕೆಂಡವನ್ನು ಗರ್ಭದಲ್ಲಿಯೇ ಇಟ್ಟುಕೊಂಡು ಉಗಿಯಲಾಗುತ್ತಿದೆ. ಅವರವರ ಮನಸ್ಥಿತಿಗಳ ಮೂಲಕ ಹೇಳುವ ಮಾತುಗಳು ಕೊರೆತೆಗೆ ಸಿಕ್ಕಿ ಇಡೀ ಸಮಾಜವೇ ಬೆಂಕಿ ಕೆಂಡದ ಮೂಲಕ ಅಲ್ಲಿನ ನಿಗೂಢ ಮನಸ್ಥಿತಿಗಳನ್ನು ಹಾಗೂ ರೂಪಿಸಿದ ಮನಸ್ಸುಗಳನ್ನು ಕೊಲೆ ಮಾಡುತ್ತದೆ. ಹೊಗೆಯಾಡಿ ಸಂಪೂರ್ಣ ಜನರೇ ಇಲ್ಲದ ಸ್ವಚ್ಛ ಮನಸ್ಸಿನವರು ಹುಟ್ಟಬೇಕಾದ ಹಾಗೂ ಅಂತಹದೇ ಪರಿಸರ ನಿರ್ಮಾಣವಾಗ ಬೇಕಾದ ಅವಶ್ಯಕತೆಗಳನ್ನು ಕೃತಿ ಧ್ವನಿಸುತ್ತದೆ. ಆದ್ದರಿಂದಲೇ ಬೇರೆ ಕಡೆಯಿಂದ ಬಂದ ಮನುಷ್ಯ ತನ್ನ ಅಸ್ತಿತ್ವವನ್ನು ಬೇರೆ ಪರಿಸರದಲ್ಲಿ ನಿರ್ಮಿಸಿಕೊಳ್ಳ ಹೊರಟಾಗ ಅಲ್ಲಿನ ಪರಿಸರದ ಮೂಲಕ ಸಿಗುವ ಜ್ಞಾನದ ಮೂಲಕ ತನ್ನನು ರೂಪಿಸಿಕೊಳ್ಳಬೇಕಾಗುತ್ತದೆ. ಅದನ್ನು ಬಿಟ್ಟು ಹೊಸ ಪರಿಸರದಲ್ಲಿ

ಹಳೆಯ ವ್ಯಕ್ತಿಯಾಗಿ ಹಳೆಯ ವ್ಯಕ್ತಿತ್ವದ ಮೂಲಕ ಅಥವ ತನ್ನ ರಾಜಕೀಯ ಅಸ್ತ್ರ, ಹಸ್ತಕ್ಷೇಪ ಮಾಡಿದಾಗ ಅದೇ ಕೊರತೆಯಾಗಿ ಅದನ್ನು ಅರ್ಥೈಸಿಕೊಳ್ಳವುದಕ್ಕೆ ಸಾಧ್ಯವಾಗದ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳುವ ವ್ಯಕ್ತಿಯೇ ಮತ್ತೊಂದು ಕೊರತೆಯಾಗಿ ಅವನ ವ್ಯಕ್ತಿತ್ವವನ್ನು ತೆರೆದುಕೊಳ್ಳುತ್ತಾನೆ. ಹೀಗೆ ಅರ್ಥವಾಗದ ಸಂಧರ್ಭ ರಾಜಕೀಯವಾಗಿ ವರ್ತಿಸಿದಾಗ ಅದರ ಪರಿಣಾಮ ನೇರವಾಗಿ ಆಗದಿದ್ದರು ನಿಧಾನವಾಗಿ ಆ ಸಮಾಜದಲ್ಲಿ ಆಗುವ ಬದಲಾವಣೆಗಳು ಅಲ್ಲಿನ ಜನರ ಮಾನಸಿಕ ನೆಮ್ಮದಿಯನ್ನು ಹದಗೆಡಿಸಿ ಆಗಬಾರದ ಅನಹುತಕ್ಕೆ ಒಡ್ಡಿಕೊಳ್ಳುತ್ತದೆ.

ಬೇರಿಯಂತೆಯೇ ಗೋಸಾಯಿಗಳೂ ಕೆಸರೂರಿನ ಸಮೀಪದ ನದಿಗಳ ಗುಂಡಿಗಳಿಗೆಲ್ಲ ನಾರು ಬೇರು ಕಾಯಿಗಳನ್ನು ಅರೆದು ಕಲೆಸಿ ಬಿಡುತ್ತಿದ್ದರು. ಸತ್ತ ಮೀನುಗಳನ್ನು ಅವರು ಒಯ್ದು ನಂತರ ದಿನ ಗಟ್ಟಲೆ ಗಿಡುಗ ಹದ್ದುಗಳು ಕ್ರಮೇಣ ಸಾಯುವ ಮೀನುಗಳಿಗಾಗಿ ನದಿಯುದ್ದಕ್ಕೂ ಹಾರಾಡುತ್ತಿರುತಿದ್ದವು. ಅವರು ನೀರಿಗೆ ಕಲಸಿದ ವಿಷ ಹೋದಲ್ಲಿಯವರೆಗೂ ಮೀನುಗಳು ಸಾಯುತ್ತಲೇ ಇರುತ್ತಿದ್ದವು. ಗೋಸಾಯಿಗಳ ಪ್ರವೇಶ ಮಾಡಿ ಹರಿಜನ ಕೇರಿಯಿಂದ ಹುಡುಗಿಯರಿಗೆ ದೂರದ ಪೇಟೆಗಳ ಆಸೆ ತೋರಿಸಿ ಅವರನ್ನು ಒಯ್ದು ಸೂಳೆ ಗೇರಿಗಳಿಗೆ ಸೇರಿಸಿ ಕಮಿಷನ್ ತೆಗೆದು ಕೊಳ್ಳುತ್ತಿದ್ದರು. ಬಡತನದ ಬೇಗೆಯಲ್ಲಿ ನರಳುತ್ತಿದ್ದ ಅನೇಕ ಹರಿಜನ ಹುಡುಗಿಯರಿಗೆ ಗೋಸಾಯಿಗಳ ಆಗಮನ ಸಂತಸದ ಉತ್ಸಾಹ ತಂದಿತ್ತು ಇವೆಲ್ಲದರಿಂದಾಗೇ ಹರಿಜನರಿಗೆ ಈ ಗೋಸಾಯಿಗಳ ಮೇಲೆ ಹಗೆತನ ಆರಂಭವಾಗಿತ್ತು. ಹರಿಜನರು ಗೋಸಾಯಿಗಳಿಗೆ ಅಲ್ಲಿ ಜಾಗ ಕೊಡಕೂಡದು.ಅವರಿಗೆ ನಮ್ಮ ಭಾವಿಯ ನೀರು ಮುಟ್ಟಗೊಡಿಸುವುದಿಲ್ಲ. ಎಂದು ಪ್ರತಿಭಟಿಸಿ ಸಿದ್ದಪ್ಪನ ದನಿಗೆ ಇವರೂ ದನಿಗೂಡಿಸಿದರು ಹೀಗೆ ಕೆಸರೂರಿನ ವಾತಾವರಣದಲ್ಲಿಯೇ ಏನೋ ಅಸಮಾಧಾನ ದ್ವೇಷಗಳು ಹೊಗೆಯಾಡುತ್ತಿತ್ತು. ಹೀಗೆ ಪರಿಸರ ಮತ್ತೇ ಹಲವು ಸಮಸ್ಯೆಗಳನ್ನು ಮೈಗೂಡಿಸಿಕೊಂಡಿದ್ದನ್ನು ನಿರೂಪಕನೇ ಗುರ್ತಿಸುತ್ತಾನೆ.

- ಅಂಗಾಡಿಯ ಶಂಕಾಸ್ಪದ ಆಗಮನ!
- ಸಿದ್ದಪ್ಪ ಗೋಸಾಯಿಗಳ ವಿರುದ್ಧ ಗಲಾಟೆ ಆರಂಭಿಸಿದ್ದು!
- ರಾಮಚಂದ್ರ ಹುಡುಗರ ಪಟಾಲಂ ಒಂದನ್ನು ಸಂಘಟಿಸಿರುವುದು!
- ಹರಿಜನರು ಗೋಸಾಯಿಗಳ ಮೇಲೆ ರೋಷಗೊಂಡಿರುವುದು!

ಕೆಸರೂರಿನ ಸಾಮಾಜಿಕ ಅತೃಪ್ತಿಗಳ ರಂಗಸ್ಥಳ ಇದ್ದಕ್ಕಿದ್ದಂತೆ ಕ್ಲಿಷ್ಟಗೊಳ್ಳ ತೊಡಗಿತ್ತು. ತಾಲ್ಲೂಕು ಬೋರ್ಡು ಹಿಡಿದುಕೊಳ್ಳಲು ಒಕ್ಕಲಿಗರೂ, ಲಿಂಗಾಯಿತರೂ, ಬ್ರಾಹ್ಮಣ ನೇತೃತ್ವದಲ್ಲಿ ಹೊರಟಿದ್ದಾರೆ.

ಈ ವಿಚಾರ ತಿಳಿದ ಸುಲೇಮಾನ್ ಬೇರಿ ಈ ಸಾರಿ ತಾಲ್ಲೂಕು ಬೋರ್ಡ್ ನಮ್ಮ ಸಾವು ಬದುಕಿನ ಪ್ರಶ್ನೆ ಎಂದು ಎಚ್ಚರಿಸಿದ್ದ.

ಇಂತಹ ರಾಜಕೀಯ ಪ್ರತಿಷ್ಠೆ, ಜಾತಿಗಳ ಶ್ರೇಷ್ಠತೆ ಸಣ್ಣತನ ವ್ಯಕ್ತಿ ವ್ಯಕ್ತಿಯನ್ನು ಆಳ ತೊಡಗಿತು ಹಾಗೂ ಅಧಿಕಾರದ ದಾಹ ನಮಗೆ ಬೇಕು ಎಂದು ಪೈಪೋಟಿಗೆ ಬಿದ್ದು ಮಾನಸಿಕ ವ್ಯವಸ್ಥೆಯೇ ಕಲಹಗಳ ವ್ಯವಸ್ಥೆಯ ರಾಜಕೀಯವಾಗ ತೊಡಗಿತು.

ಕೃತಿಯ ನಿರೂಪಣೆಯಲ್ಲಿ ಕೆಸರೂರಿನ ಅವನತಿಗೆ ಕಾರಣಗಳನ್ನು ಹುಡುಕುತ್ತ ಮಾನಸಿಕ ರಹಸ್ಯಗಳು ಪ್ರಕೃತಿಯ ರಹಸ್ಯಗಳು ಒಟ್ಟೊಟ್ಟಿಗೆ ಸಾಗಿ ಪ್ರಕೃತಿಯಲ್ಲಿ ಸಂಬವಿಸಬಹುದಾದ "ಢೊಂಮ್" ಎಂಬೊಂದು ಸದ್ದು ನೆಲವೆಲ್ಲಾ ನಡುಗುವಂತೆ ಕಿವಿ ಬಿರಿವಂತೆ ಬಂದು ಅಪ್ಪಳಿಸಿತು. ಪರ್ವತ ಶ್ರೇಣಿಗಳು ಮಾರ್ದನಿಸಿದವು. ಹೀಗೆ ಕೃತಿ ಸಮಾಜದ ಗರ್ಭದಲ್ಲಿ ಹುದುಗಿದ ವಿಷ ಇದ್ಯಾಕೆ ಈ ಊರಿನ ಬದುಕು ಇಷ್ಟೊಂದು ಕ್ರೂರ ಅಸಹನೀಯವಾಗ್ತಾ ಇದೆ.? ಪರಿಸರ ಹಾಗೂ ಮನುಷ್ಯ ಕ್ರಿಯೆಗಳನ್ನು ಹಿಡಿಯುವ ಕೃತಿ ಅಲ್ಲಿನ ವಾತಾವರಣಕ್ಕೆ ಒಗ್ಗಿಕೊಳ್ಳದ ಆ ಪರಿಸರಕ್ಕೆ ತಂದೊಡ್ಡುವ ಸಮಸ್ಯೆಗಳ ಬಗ್ಗೆ ನಿರೂಪಣೆ ತೆರೆದುಕೊಳ್ಳುವುದು ಅಭಿವ್ಯಕ್ತಿ ಕ್ರಮದಲ್ಲಿ ತಿಳಿದು ಬರುತ್ತದೆ. ಆದರೆ ಸಮಸ್ಯೆಗಳೇ ಬಗ್ಗೆ ಅರಿಯದ ಕಾರಣ ಅಲ್ಲಿನ ಪರಿಸರವೇ ಅದಕ್ಕೆ ತಕ್ಕ ಉತ್ತರವನ್ನು ಹುಡುಕುತ್ತದೆ. ಆದರೆ ಆ ಪರಿಸರವೇ ವ್ಯಕ್ತಿಯ ರೋಗಗ್ರಸ್ಥವಾದ ವ್ಯಕ್ತಿತ್ವಗಳನ್ನು ನಾಶಮಾಡುವುದರ ಮೂಲಕ ಲಂಟಾನದ ಕಾಡಿನ ವೇದಿಕೆಯ ಮೇಲೇ ಧಗಧಗ ಎಂದು ನರ್ತಿಸಲಾರಂಭಿಸಿತು. ಇದರ ಮೂಲಕ ಬರುವ ದಟ್ಟ ಹೊಗೆ ಆ ಸಮಾಜದ ನಿರ್ಜೀವತೆಯ ಜೀವ ಸಂಕುಲವನೇ ನಾಶ ಮಾಡುವ ಮೂಲಕ ಪರಿಸರ ತನ್ನ ಅಸ್ತಿತ್ವವನ್ನು ಗುರ್ತಿಸಿಕೊಂಡಿದೆ. ಎಂದೇ ಹೇಳಬೇಕಾಗುತ್ತದೆ. ಏಕೆಂದರೆ ಸಹಿಸಿಕೊಳ್ಳಲಾಗದ ಕೋಪ, ದ್ವೇಷ,ಅಸೂಯೆ, ವ್ಯಕ್ತಿತ್ವದ ಸಣ್ಣತನವನ್ನು ನಾಶ ಮಾಡುವ ಪರಿಸರ ತನ್ನಲ್ಲಿಯೇ ಇದ್ದು ತನ್ನಗೆ ಮೋಸ ಮಾಡಿದ ವ್ಯಕ್ತಿಯ ವಿರುದ್ಧ ಅವನನ್ನೇ ನಾಶ ಮಾಡಿ ತನ್ನ 'ಆಗುವಿಕೆ'ಯನ್ನು ತೋರಿಸುತ್ತದೆ. ಇಂತಹ ಸಂದರ್ಭದಲ್ಲಿ "ಜೇನುಕಲ್ಲು ಗುಡ್ಡದ ತುದಿ ಚೆನ್ನಾಗಿ ಕಾಣ್ತಿದೆ. ಕೆಸರೂರಿನ ಜನ ಈಗಲೂ ಎಲ್ಲಾ ಅಲ್ಲಿಗೆ ಓಡಿದರೆ ಬೆಂಕಿಯಿಂದ ತಪ್ಪಿಸಿಕೋ ಬಹುದು ಎಂದಳು ಜಯಂತಿ. ಎಲ್ಲೋ ಒಂದರಲ್ಲಿ ಮನುಷ್ಯ ಪ್ರಕೃತಿ ಕೈ ಯಿಂದ ತಪ್ಪಿಸಿಕೊಂಡು ಮತ್ತೇ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳ ಬಹುದಾದ ಮನುಷ್ಯನ ವರ್ತನೆಗೆ ಕೊನೆ ಮೊದಲಿಲ್ಲ. ಆದ್ದರಿಂದಲೇ ಅದಕ್ಕೂ ಸ್ಥಳ ವಿಲ್ಲದೆ ಇರುವುದನ್ನು "ನಮಗೆ ಕಾಣ್ತಿದೆ! ಅವರಿಗೆ ಕಾಣ್ತದ? ಈ ಹೊಗೇಲಿ!"ಎಂದ ರಫಿ ಹೊಸದಾದ ಜನಾಂಗಕ್ಕೆ ಹಾದಿ ತೋರುವ ನಮಗೆ ಕಾಣ್ತಿದೆ. ರೋಗಗ್ರಸ್ಥವಾದ ಜನರ ಸಣ್ಣತನಕ್ಕೆ ಕಾಣದ ಹಾಗೆ ಆ ದಟ್ಟ ಹೊಗೆ ಅವರನ್ನು ಮುತ್ತಿರುವುದು

ಹಾಗೂ ತಾನೇ ಬೆಳೆಸಿದ ಸಂದರ್ಭ ಹಾಗೂ ವ್ಯಕ್ತಿಯನ್ನು ಆ ಪರಿಸರವೇ ಬಲಿ ತೆಗೆದುಕೊಳ್ಳವುದು ಆ ಪರಿಸರವೇ ಮಾಡುವ ನಿಯಮವಾಗಿರುತ್ತದೆ.

'ವಿಮರ್ಶೆಯ ವಿಮರ್ಶೆ' ಕೃತಿಯಲ್ಲಿ ನೀಡಲಾಗಿರುವ ಪ್ರಶ್ನೋತ್ತರಗಳಲ್ಲಿ ಕೃತಿಗೆ ಅನ್ವಯವಾಗುವಂತ ಒಂದು ಪ್ರಶ್ನೆ ಹಾಗೂ ಅದಕ್ಕೆ ನೀಡಿದ ಉತ್ತರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ನಿಮ್ಮ ಕಾದಂಬರಿ, ಕಥೆಗಳಲ್ಲಿ ಸಹಜವಾದ ಮುಸ್ಲಿಮರು ಬರ್ತ್ತಾರೆ. ಈಚಿನ ನಿಮ್ಮ ಮೂಲಭೂತವಾದಿಗಳ ಬಗೆಗಿನ ಲೇಖನವನ್ನು ಹಲವು ಮುಸ್ಲಿಂ ಓದುಗರು ಸಮರ್ಥಿಸಿಲ್ಲ. ಅಭದ್ರತೆಯನ್ನು ಘೋಷಿಸಿಕೊಂಡು ಕೆಲವು ಮತಾಂಧರು ಉಗ್ರಗಾಮಿಗಳಾಗುವ ಸೂಚನೆ ಕೊಡುತ್ತಿರುವ ಈ ಮುಸ್ಲಿಮರ ಕತೆಯೇನು? ಎಂದು ಕೇಳಿದ ಪ್ರಶ್ನೆಗೆ ಪ್ರತಿಕ್ರಿಯೆ ನೀಡಿದ ತೇಜಸ್ವಿ ಮೂಲಭೂತವಾದಿಗಳಿಗೆ ನಾಯಕತ್ವ ವಹಿಸುವುದರ ಮೂಲಕ ಮುಸ್ಲಿಮರು ಅತ್ಯಂತ ಅಪಾಯಕಾರಿ ಪರಿಸ್ಥಿತಿಯನ್ನು ಸೃಷ್ಟಿಸುತ್ತಿದ್ದಾರೆ. ಇಲ್ಲಾ ಅವರ ವಿರುದ್ಧ ದ್ವೇಷವನ್ನು ಕೆರಳಿಸಿ ಹಿಂದೂಗಳ ಓಟು ಗಳಿಸಲೆತ್ನಿಸುವವರು, ಇಲ್ಲಾ ಅವರನ್ನು ಸದಾ ಅಭದ್ರ ಸ್ಥಿತಿಯಲ್ಲಿಟ್ಟು ಅವರನ್ನು ಪುಸಲಾಯಿಸುತ್ತ ಇಲ್ಲವೇ ಬ್ಲಾಕ್ ಮೇಲ್ ಮಾಡುತ್ತಾ ಅವರ ಓಟು ಗಿಟ್ಟಿಸಲು ಯತ್ನಿಸುತ್ತಿರುವವರು, ಈ ಇಬ್ಬರ ನಡುವೆ ಸಿಕ್ಕು ಮುಸ್ಲಿಮರು ನರಕದಲ್ಲಿ ಬದುಕುತ್ತಿದ್ದಾರೆ. ಅವರನ್ನು ಕೇವಲ ನಮ್ಮಂಥ ನರಮನುಷ್ಯರೆಂದು ನೋಡುವವರನ್ನು ಅವರು ನಂಬುವುದೇ ಇಲ್ಲಿ ಅವರಿಗೆ ಉಳಿದಿರುವ ಮಾರ್ಗ.ಆದರೆ ನಮ್ಮೊಡನೆ ಇರಬೇಕೆಂದಾದರೆ ಅವರು ಯಾವ ಮುಲಾಜನ್ನೂ ನಿರೀಕ್ಷಿಸಬಾರದು. ನಾವು ಭಗವದ್ಗೀತೆ, ಖುರಾನು, ಬೈಬಲ್ಲು, ಎಲ್ಲವನ್ನೂ ಯಾವ ರೀತಿಯ ದಾಕ್ಷಿಣ್ಯವಿಲ್ಲದೆ ವಿಮರ್ಶಿಸುವವರು. ಮುಸ್ಲಿಮರು ನಿಜವಾಗಿಯೂ ಅವರಿರುವ ನರಕದಿಂದ ಪಾರಾಗಬೇಕಾದರೆ ಗಟ್ಟಿ ಮನಸ್ಸು ಮಾಡಿ ತಮ್ಮ ಪೂರ್ವಾಗ್ರಹಗಳಿಂದ ಹೊರಬರಬೇಕಾಗುತ್ತದೆ.

ಹಿಂದೂಗಳು ಅವರ ಧರ್ಮವನ್ನೂ, ಮುಸ್ಲಿಮರು ಅವರ ಧರ್ಮವನ್ನೂ ಸರಿಯಾಗಿ ಪಾಲಿಸಿದರೆ ಯಾವ ಜಗಳವೂ ಇರುವುದಿಲ್ಲ ಎಂದು ಮೂಲಭೂತವಾದಿಗಳು ಹೇಳುತ್ತಾರೆ. ಆದರೆ ಚರಿತ್ರೆ ಯನ್ನು ನೋಡಿದರೆ ಯಾವಾಗ ಜನಗಳು ಧರ್ಮವನ್ನು ಅಲಕ್ಷಿಸಿ ಮಾನವೀಯತೆ ಮುಖ್ಯ ಎಂದು ಬಗೆದಿದ್ದಾರೋ ಆಗೆಲ್ಲಾ ಶಾಂತಿ ಸಮಾಧಾನಗಳು ನೆಲೆಸಿದ್ದು ಗೊತ್ತಾಗುತ್ತದೆ. ಜಗತ್ತಿನ ಎಲ್ಲ ಧರ್ಮಗಳೂ ಆಧುನಿಕ ಸಮಾಜದಲ್ಲಿ ಅವನತಿಯತ್ತ ಸಾಗುತ್ತಿವೆ. ಸಾಂಸ್ಥಿಕ ಧರ್ಮಗಳ ಬಗ್ಗೆಯೇ ಮನುಷ್ಯನಿಗೆ ಅಲಕ್ಷ್ಯ ಹೆಚ್ಚುತ್ತಾ ಇದೆ. ಸಾಸ್ಥಿಕ ಸಂಘಟನೆಗಳನ್ನು ಮೀರಿದ ವೈಯಕ್ತಿಕ ಧಾರ್ಮಿಕತೆಯತ್ತ ಆಧುನಿಕ ನಾಗರಿಕತೆ ನಿಧಾನವಾಗಿ ಸಾಗುತ್ತದೆ. ಮೂಲಭೂತವಾದ ಎಲ್ಲ

ಧರ್ಮಗಳಲ್ಲೂ ತಲೆ ಎತ್ತುತ್ತಿರುವುದಕ್ಕೆ ಇದೇ ಬಹುಮುಖ್ಯ ಕಾರಣ. ತಮ್ಮ ಧಾರ್ಮಿಕತೆಯನ್ನು ಹೆಂಗಸರನ್ನು ತುಳಿಯುವುದರ ಮೂಲಕ, ಇತರ ಧರ್ಮಗಳನ್ನು ದ್ವೇಷಿಸುವುದರ ಮೂಲಕ ಉಳಿಸಿಕೊಳ್ಳಲು ಎಲ್ಲರೂ ಯತ್ನಿಸುತ್ತಿದ್ದಾರೆ. ಎಲ್ಲ ಮೂಲಭೂತವಾದಿಗಳು ಇರುವುದು ಆಯಾ ಧರ್ಮೀಯರನ್ನು ಶೋಷಿಸುವುದಕ್ಕೆ. ಆದರೆ ಅವರು ಮೇಲೆ ಹಾಕುವ ಸೋಗು ರಕ್ಷಿಸಲು ಎಂದು. ಹೇಳಿದ್ದಾರೆ.

ಅಡಿಟಿಪ್ಪಣಿಗಳು


1. ಓ ಎಲ್ ನಾಗಭೂಷಣ ಸ್ವಾಮಿ ; ವಿಮರ್ಶೆಯ ಪರಿಭಾಷೆ ಮೊದಲ ಆವೃತಿ 1998
2. ಕೆ. ಪಿ ಪೂರ್ಣಚಂದ್ರ ತೇಜಸ್ವಿ ; ಚಿದಂಬರ ರಹಸ್ಯ,ಸುವರ್ಣ ಕರ್ನಾಟಕ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ,2006 ಪು 01, 217
3. – ಅದೇ –ಪು 10, 11
4. ನಟರಾಜ್ ಹುಳಿಯಾರ್ (ಸಂ) ರಾಮಮನೋಹರ ಲೋಹಿಯಾ ಚಿಂತನೆ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ 2008 ಪು 84, 87, 88, 89.
5. ಕೆ. ಪಿ.ಪೂರ್ಣಚಂದ್ರ ತೇಜಸ್ವಿ ; ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ, ಎರಡನೆಯ ಮುದ್ರಣ 2010, ಪು 13
6. ಕೆ. ಪಿ ಪೂರ್ಣಚಂದ್ರ ತೇಜಸ್ವಿ ; ಚಿದಂಬರ ರಹಸ್ಯ,ಸುವರ್ಣ ಕರ್ನಾಟಕ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ,2006 ಪು 13
7. ಅದೇ – ಪು 13.
8. ಕೆ. ಪಿ ಪೂರ್ಣಚಂದ್ರ ತೇಜಸ್ವಿ ; ವ್ಯಕ್ತಿ ವಿಶಿಷ್ಟ ಸಿದ್ಧಾಂತ,
9. ನಟರಾಜ್ ಹುಳಿಯಾರ್ ; ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯದಲ್ಲಿ ಆಧುನಿಕತೆ ಮತ್ತು ಪರಂಪರೆ
10. ಕೆ. ಪಿ ಪೂರ್ಣಚಂದ್ರ ತೇಜಸ್ವಿ ; ಚಿದಂಬರ ರಹಸ್ಯ,ಸುವರ್ಣ ಕರ್ನಾಟಕ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ ,2006 ಪು 40
11. ಅದೇ – ಪು 98
12. ನಟರಾಜ್ ಹುಳಿಯಾರ್‌ರವರು ಎಂ. ಫಿಲ್. ತರಗತಿಗಳಲ್ಲಿ ಮಾಡಿದ ಉಪನ್ಯಾಸದಲ್ಲಿ ಮಾಡಿಕೊಂಡ ಟಿಪ್ಪಣಿಗಳನ್ನು ಪಠ್ಯ ಅರ್ಥೈಸುವಿಕೆಯಲ್ಲಿ ಬಳಸಿಕೊಳ್ಳಲಾಗಿದೆ.
13. ಡಾ. ಎಚ್. ಶಶಿಕಲಾ ರವರು ಎಂ. ಫಿಲ್ ತರಗತಿಯಲ್ಲಿ ವಿಮರ್ಶೆಯ ಮಾದರಿಗಳನ್ನು ಪರಿಚಯಿಸುತ್ತಾ ಉಪನ್ಯಾಸ ಮಾಡುವ ಸಂದರ್ಭದಲ್ಲಿ ಮಾಡಿಕೊಂಡ ಟಿಪ್ಪಣಿಗಳು

## ಅಧ್ಯಾಯ –6
## ಕರ್ವಾಲೊ ಕಾದಂಬರಿಯ ವಸ್ತು ಮತ್ತು ತಂತ್ರ

ವ್ಯಕ್ತಿ ಕೇಂದ್ರಿತವಾಗಿ ಸಾಗುವ ಕಥೆ ಪ್ರಕೃತಿಯಲ್ಲಿರುವ ರಹಸ್ಯವನ್ನು ಭೇದಿಸಲು, ಅರ್ಥೈಸಿಕೊಳ್ಳಲು ಹಾಗೂ ಅವನತಿಯ ಅಂಚಿನಲ್ಲಿರುವ ಹಾರುವ ಓತಿಯನ್ನು ಓದುಗನಿಗೆ ಪರಿಚಯಿಸಲು ಸಾಗುವ ಪ್ರಯಾಣ ಕಥೆಯಾದ ಕರ್ವಾಲೊ ಕಾದಂಬರಿಯ ಕಥಾವಸ್ತುವಾಗಿದೆ. ವಿಜ್ಞಾನಿಯಾದ ಕರ್ವಾಲೊ ಪರಿಚಯದ ನಂತರದಲ್ಲಿ ಸಾಗುವ ಕ್ರಿಯೆ, ಪರಿಚಯಿಸಿಕೊಳ್ಳಬೇಕಾದ ಹಾರುವ ಓತಿಯನ್ನು ನೋಡುವ ಕುತೂಹಲದಲ್ಲಿ ನಿರೂಪಕ ಬೆಳೆಸುವ ಪ್ರಯಾಣ, ಕರ್ವಾಲೊರವರ ವ್ಯಕ್ತಿತ್ವದಲ್ಲಿಯೂ ಆಗಬೇಕಾದ ಬದಲಾವಣೆಗಳನ್ನು ಹಾಗೂ ಕಣ್ಣುತೆರೆದು ನೋಡಬೇಕಾದ ಪ್ರಕೃತಿ, ಸಮಾಜವನ್ನು ಅನುಭವಗಳ ಮೂಲಕ ಹಿಡಿಯಲು ಸಾಗುವ ಪ್ರಯಾಣದ ಕಥೆಯಾಗಿ ಕರ್ವಾಲೊ ಕಾದಂಬರಿ ಚಿತ್ರಿಸುತ್ತದೆ.

ಕರ್ವಾಲೋ ಒಬ್ಬ ಕೀಟಶಾಸ್ತ್ರಜ್ಞ ಹಾಗೂ ಸಸ್ಯಶಾಸ್ತ್ರಜ್ಞ "ನಿರೂಪಕನಿಗೆ ತನ್ನ ಗದ್ದೆಗೆ ಒಂದು ಬಗೆಯ ಹುಳುವಿನ ಕಾಟ ಆರಂಭವಾಗಿತ್ತು. ಅದು ಕಾಡು ಕಡಿದು ಹೊಸದಾಗಿ ಮಾಡಿಸಿದ ಗದ್ದೆಯಾದರಿಂದ ನಾನು ಅನುಭವಿಸಬೇಕಾದ ನಷ್ಟ ತೊಂದರೆಗಳಿಗೆ ಕೊನೆ ಮೊದಲೇ ಇರಲ್ಲಿಲ್ಲ ಮೊದಲನೇ ವರ್ಷವಂತೂ ಹಾಕಿದ ಭತ್ತವೆಲ್ಲಾ ಬೃಹದಾಕಾರವಾಗಿ ಜೊಂಡಿನಂತೆ ಬೆಳೆದು ಹಲವಾರು ಜೊಳ್ಳುಕಾಳುಗಳನ್ನು ಬಿಟ್ಟಿತ್ತು ಭತ್ತ ತೂರಿದಾಗ ತೂರಿದ ಭತ್ತವಷ್ಟೂ ಗಾಳಿಗೆ ಹಾರಿ ಹೋಗಿ ಕುಯಿಲು ಮಾಡಿಸಿದ ಖರ್ಚೂಕೂಡ ಗಿಟ್ಟಿರಲ್ಲಿಲ್ಲ. ಆದ್ದರಿಂದಲೇ ಕರ್ವಾಲೋರವರನ್ನು ಭೇಟಿಯಾಗುವ ಸಂದರ್ಭ ಒದಗಿಬರುತ್ತದೆ."[1] ತಮ್ಮ ಗದ್ದೆಯ ಸಮಸ್ಯೆಯನ್ನು ಕರ್ವಾಲೊರವರ ಮುಂದಿಟ್ಟು ಅದಕ್ಕೆ ಪರಿಹಾರವಾಗಿ ಕರ್ವಾಲೊ ಕೆಲವೊಂದು ಉಪಾಯಗಳನ್ನು ಹೇಳಿದರು ಇದಕ್ಕೆ ಪ್ರತಿಕ್ರಿಯೆ ನೀಡಿದ ನಿರೂಪಕ "ಬರ್ತೀನಿ ಸಾರ್ ನಿಮ್ಮಗೆ ತೊಂದರೆ ಕೊಟ್ಟೆನೇನೋ"[2] ಎಂದು ಹೇಳಿದರು

ಕರ್ವಾಲೊ "ನನ್ನ ಕೆಲಸ ಇಲ್ಲಿ ನಿಮ್ಮಂಥೋರ ತೊಂದರೆ ತಾಪತ್ರಯಗಳನ್ನು ನೋಡಿಕೊಳ್ಳೋದು, ಕೈಲಾದ ಸಹಾಯ ಮಾಡೋದು ಆದ್ದರಿಂದ ನನಗೆ ತೊಂದರೆ ಕೊಡುವುದು ನಿಮ್ಮ ಹಕ್ಕು"[3] ಎಂದರು. ವಿಜ್ಞಾನಿಗಳಾದರು ತಾವು ಮಾಡಬೇಕಾದ ಕೆಲಸ ಕಾರ್ಯಗಳನ್ನು ಶಿಸ್ತಿನಿಂದ ಮಾಡಿ ಮುಗಿಸಬೇಕು. ಇಲ್ಲಿ ನಿರೂಪಕನಾಗಿ ಬರುವ ನಾನು ಎಂಬ ಪಾತ್ರಕ್ಕೆ ಆಶ್ಚರ್ಯವೆಂಬುದು ಕಾದಿರುತ್ತದೆ. ಏಕೆಂದರೆ ತನ್ನ ಅನುಭವದಲ್ಲಿ ಇಷ್ಟು ಸೌಜನ್ಯ ಪೂರ್ಣವಾಗಿ ಅಧಿಕಾರದಲ್ಲಿದ್ದರು ನಯವಾಗಿ ವಿನಯವಾಗಿ ತಾನು ಮಾಡಬೇಕಾದ ಕೆಲಸವನ್ನು ಪ್ರಾಮಾಣಿಕವಾಗಿ ಹೇಳುವ ಅಧಿಕಾರಿಯಾಗಿರುತ್ತಾರೆ. ಕರ್ವಾಲೋ ಅಂದರೆ ನಿರೂಪಕನಿಗೆ ತಾನು ಗ್ರಹಿಸಿದ್ದಕ್ಕಿಂತ ಭಿನ್ನವಾಗಿ ಇರುವುದನ್ನು ವಾಸ್ತವದಲ್ಲಿ ಗ್ರಹಿಸುತ್ತಾನೆ. ಹಾಗೂ ಕೆಲಸದ ಮೇಲೆ

ಅವರಿಗೆ ಇರುವ ಶ್ರದ್ಧೆ, ಪ್ರಾಮಾಣಿಕತೆಯ ಜೊತೆಯಲ್ಲಿಯೇ ಮಾನವೀಯತೆಯನ್ನು ಸೇರಿಸಿಕೊಂಡು ತಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಆದರೆ ತಾವು ಮಾಡುವ ಕೆಲಸದಲ್ಲಿ ಯಾವುದೇ ದರ್ಪ, ಅಹಂ ಇಲ್ಲದೆ ಮಾಡಬೇಕು. ಎಂಬುದು ವಿಜ್ಞಾನಿಯಾದ ಕರ್ವಾಲೋ ರವರ ನುಡಿ ಹಾಗೂ ನಡೆಯಾಗಿರುತ್ತದೆ. ನಿರೂಪಕ ಈ ಅನುಭವದಲ್ಲಿ ಕರ್ವಾಲೋರವರನ್ನು ಬಿಟ್ಟು ಬೇರೆಯವರು ಇದ್ದಿದ್ದರೆ ಅವರ ಬಾಯಲ್ಲಿಯಾದರೂ ಕೇವಲ ಅಧಿಕಾರ ಶಾಹಿಯ ಬೊಗಳೆಯಾಗ ಬಹುದಾದ ಈ ಉಕ್ತಿಗಳು ಕರ್ವಾಲೋರವರ ಪ್ರಾಮಾಣಿಕ ಧ್ವನಿಯಲ್ಲಿ ಸಹಜವಾಗಿ ಬಂದವು. ಅಂದರೆ ತನ್ನ ಸುತ್ತಲಿನ ಜಗತ್ತನ್ನು ನೋಡುವುದಕ್ಕಿಂತ ಭಿನ್ನವಾಗಿ ನೋಡಬೇಕಾದ ಅವಶ್ಯಕತೆ ಇದೆ ಎಂಬುದನ್ನು ಇಲ್ಲಿಯೇ ಗ್ರಹಿಸಬಹುದಾಗುತ್ತದೆ.

ಈ ಕಾದಂಬರಿ ನಿರೂಪಕನ ನಿರೂಪಣೆಯಲ್ಲಿ ಉತ್ತಮ ಪುರುಷ ನಿರೂಪಣೆಯನ್ನು ಬಳಸಿಕೊಂಡಿದೆ. ಇದರ ಬಗ್ಗೆ ವಿವರಿಸುವುದಾದರೆ ಕಾದಂಬರಿಯ ನಿರೂಪಣೆಯ ಅಂಶವಾದ ಪಾತ್ರ ಕ್ರಿಯೆ ಭೂಮಿಕೆ ಮತ್ತು ಘಟನೆಗಳನ್ನು ಲೇಖಕರು ಯಾವುದಾದರೂ ಒಂದು ನೆಲೆಯಲ್ಲಿ ನಿಂತು ಒಂದು ವಿಶಿಷ್ಟ ದೃಷ್ಟಿಯಿಂದ ಓದುಗನಿಗೆ ನಿರೂಪಿಸುತ್ತಾನೆ ಈ ನೆಲೆ ಮತ್ತು ದೃಷ್ಟಿ ಒಂದೇ ಕೃತಿಯಲ್ಲಿ ಬೇರೆ ಬೇರೆ ಯಾಗಬಹುದು. ದೃಷ್ಟಿಕೋನ ನಿರೂಪಣೆಯ ತಂತ್ರಕ್ಕೆ ಸಂಬಂಧಿಸಿದ್ದು ಅಂದರೆ ಕಾದಂಬರಿಯ ನಿರೂಪಣಾ ವಿಧಾನವನ್ನು ನಿರ್ಧರಿಸುವಲ್ಲಿ ನಿರೂಪಣೆಯ ದೃಷ್ಟಿಕೋನದ ಸಮಸ್ಯೆ ಮಹತ್ವದ್ದಾಗಿದೆ.

ಮೂಲಭೂತವಾಗಿ ಇರುವುದು ಎರಡೇ ರೀತಿಯ ದೃಷ್ಟಿಕೋನಗಳು ಅವುಗಳೆಂದರೆ

- ಪ್ರಥಮ ಪುರುಷ ನಿರೂಪಣೆ
- ಉತ್ತಮ ಪುರುಷ ನಿರೂಪಣೆ

ಕತೆಗಾರನಿಗೆ ನಿರೂಪಣೆಯಲ್ಲಿ ಎಷ್ಟು ಮಟ್ಟಿನ ಸ್ವಾತಂತ್ರ್ಯ ಅಥವಾ ನಿರ್ಬಂಧವಿದೆ. ಎಂಬುವುದನ್ನು ಗಮನಿಸಿ ಈ ಎರಡು ಪ್ರಭೇದಗಳಲ್ಲಿ ಅನೇಕ ಉಪವಿಭಾಗಗಳನ್ನು ಗುರುತಿಸಬಹುದು. ಪ್ರಥಮ ಪುರುಷ ನಿರೂಪಣೆ : ಇಲ್ಲಿ ನಿರೂಪಕ ಕಥೆಯ ಚೌಕಟ್ಟಿನಿಂದ ಹೊರಗೆ ಇರುವವನಾಗಿದ್ದು ಎಲ್ಲ ಪಾತ್ರಗಳನ್ನೂ ಅವುಗಳ ಹೆಸರಿನಿಂದಲೋ 'ಅವನು', 'ಅವಳು', 'ಅವು' ಎಂದೋ ಗುರ್ತಿಸುತ್ತಾನೆಉತ್ತಮ ಪುರುಷ ನಿರೂಪಣೆ : ಇಲ್ಲಿ ನಿರೂಪಕ ಕಥೆಯ ಪ್ರಪಂಚಕ್ಕೆ ಸೇರಿದವನಾಗಿದ್ದು ಕಥೆಯ ಒಂದು ಪಾತ್ರವೇ ಆಗಿ, ತಾನೇ ಎಲ್ಲವನ್ನೂ ವಿವರಿಸುತ್ತಾನೆ. ಕೃತಿಕಾರನ

ಹೆಸರಿನಿಂದಲೋ ಅಥವ 'ನಾನು' ಎಂದು ತನ್ನನ್ನು ಕರೆದುಕೊಂಡು ಕೃತಿಯ ಅನಾವರಣ ಮಾಡುತ್ತಾನೆ.

ಉಪ ವಿಭಾಗಗಳು : ಸರ್ವಸಾಕ್ಷಿತ್ವ ದೃಷ್ಟಿಕೋನ ; ಇಲ್ಲಿ ನಿರೂಪಕ ಕಥೆಯ ಬಗ್ಗೆ, ಪಾತ್ರಗಳ ಬಗ್ಗೆ, ಘಟನೆಗಳ ಬಗ್ಗೆ, ಏನೆಲ್ಲವನ್ನು ತಿಳಿಯಬೇಕೋ ಅದೆಲ್ಲವನ್ನೂ ತಿಳಿದವನು, ಬೇರೆ ಬೇರೆ ಕಾಲಗಳಲ್ಲಿ ಸ್ಥಳಗಳಲ್ಲಿ ಸ್ವತಂತ್ರವಾಗಿ ಸಂಚರಿಸುತ್ತ ನಿರೂಪಿಸಬಲ್ಲ ಒಂದು ಪಾತ್ರದಿಂದ ಮತ್ತೊಂದು ಪಾತ್ರದತ್ತ ಗಮನ ಹರಿಸಬಲ್ಲ ಅವರ ನಡೆ ನುಡಿಗಳಲ್ಲಿ ಬೇಕಾದಷ್ಟನ್ನು ಹೇಳಿ ಉಳಿದದ್ದನ್ನು ತನಗೆ ಸೂಕ್ತ ಕಂಡಂತೆ, ಸೂಕ್ತ ಸಮಯದವರೆಗೆ ಮುಚ್ಚಿಡಬಲ್ಲ ಪಾತ್ರಗಳ ಮನಸ್ಸಿನೊಳಕ್ಕೆ ಪ್ರವೇಶಿಸಿ ಅವರ ವರ್ತನೆಗಳ ಹಿಂದಿನ ಭಾವನೆ, ಉದ್ದೇಶಗಳನ್ನು ತಿಳಿಸುವ ವಿಶೇಷ ಸಾಮರ್ಥ್ಯ ಸರ್ವ ಸಾಕ್ಷಿತ್ವ ದೃಷ್ಟಿಕೋನವನ್ನು ಆಯ್ದುಕೊಳ್ಳುವ ಲೇಖಕನಿಗೆ ಇದೆ. ಈ ವಿಧಾನದಲ್ಲಿ ನಿರೂಪಕನ ಸ್ವಭಾವ ಎರಡು ರೀತಿಯದ್ದಾಗಿರಲು ಸಾಧ್ಯವಿದೆ. ನಿರೂಪಕನು ವ್ಯಾಖ್ಯಾನಕಾರ ನಿರೂಪಕನಾಗಿರಬಹುದು ಅಥವ ವಸ್ತು ನಿಷ್ಠ ನಿರೂಪಕನಾಗಿರಬಹುದು ವ್ಯಾಖ್ಯಾನಕಾರ ನಿರೂಪಕನು ಕಥೆಯನ್ನು ನಿರೂಪಿಸುವುದರೊಂದಿಗೇ ಪಾತ್ರಗಳ ಬಗ್ಗೆ ಆಗಾಗ್ಗೆ ವ್ಯಾಖ್ಯಾನ ಮಾಡುತ್ತಾ, ಪಾತ್ರಗಳ ಕ್ರಿಯೆಯ ಮೌಲ್ಯ ಮಾಪನ ಮಾಡುತ್ತ ಬದುಕಿನ ಬಗ್ಗೆ ತನ್ನ ಅಭಿಪ್ರಾಯಗಳನ್ನು ನೀಡುತ್ತಿರುತ್ತಾನೆ. ಬಹಳ ಮಟ್ಟಿಗೆ ಸರ್ವ ಸಾಕ್ಷಿತ್ವ ದೃಷ್ಟಿಕೋನದ ವ್ಯಾಖ್ಯಾನಕಾರ ನಿರೂಪಕನ ಟೀಕೆ ಟಿಪ್ಪಣಿಗಳನ್ನು ಅಧಿಕೃತವೆಂದೇ ಪರಿಗಣಿಸಬೇಕಾಗಿತ್ತದೆ. ಅವು ಲೇಖಕನ ನಿಜವಾದ ಅಭಿಪ್ರಾಯಗಳ ಪೂರ್ವಾಗ್ರಹಗಳು ನಿರೂಪಣೆಯೂ ಹೌದು.

ಕೆಲವು ಬಾರಿ ನಿರೂಪಕ ಸರ್ವಸಾಕ್ಷಿತ್ವ ದೃಷ್ಟಿಕೋನವನ್ನು ಆಯ್ದುಕೊಂಡರೂ, ಯಾವ ವ್ಯಾಖ್ಯಾನಗಳನ್ನೂ ನೀಡದೆ, ಅವ್ಯೆಯಕ್ತಿಕವಾಗಿ ನಿರೂಪಣೆಯನ್ನು ಮಾಡುತ್ತಾನೆ. ಅಥವ ಮಾಡಬಹುದು. ವಸ್ತುನಿಷ್ಠ ನಿರೂಪಕನಾಗಿ ಆತ ನಾಟಕೀಯ ಸನ್ನಿವೇಶಗಳಲ್ಲಿ ಪಾತ್ರಗಳ ಕ್ರಿಯೆಯನ್ನು ಓದುಗರಿಗೆ "ತೋರಿಸಿ"ಕೊಡುತ್ತಾನೆ. ಆದರೆ ತನ್ನ ವೈಯಕ್ತಿಕ ತೀರ್ಮಾನಗಳನ್ನು ನೀಡುವುದಿಲ್ಲ. ಈ ತಂತ್ರದ ಅತಿರೇಕಕ್ಕೆ ಹೋದಾಗ ನಿರೂಪಕ ಪಾತ್ರಗಳ ಕ್ರಿಯೆಯನ್ನು ಮಾತ್ರ ತೋರಿಸಿ ಅವನ ಭಾವನೆ ಉದ್ದೇಶಗಳನ್ನು ಕುರಿತು ಪೂರ್ಣವಾಗಿ ಮೌನತಾಳುವುದನ್ನು ನೋಡಬಹುದು. ಉತ್ತಮ ಪುರುಷ ನಿರೂಪಣೆ : ಇದು ನಾನು ಎಂದು ಕರೆದುಕೊಳ್ಳುವ ನಿರೂಪಣೆಗೆ ಕಥೆಯ ಚೌಕಟ್ಟಿನಲ್ಲಿ ಏನೇನು ತಿಳಿದಿರುತ್ತದೆಯೋ ಅವನು ಏನನ್ನು ಅನುಭವಿಸಿರುತ್ತಾನೆಯೋ ಅಥವ ಇತರ ಪಾತ್ರಗಳೊಡನೆ ನಡೆಸುವ ಸಂಭಾಷಣೆಯಲ್ಲಿ ತಿಳಿಯುತ್ತಾನೋ ಅಥವ ಅನುಮಾನಿಸುಯತ್ತಾ ಚಿಂತಿಸುತ್ತಾನೋ ಅವುಗಳ ನಿರೂಪಣೆಗೆ ಮಾತ್ರ ಸೀಮಿತವಾಗ ಬೇಕಾಗಿತ್ತದೆ. ಈ ತಂತ್ರದಲ್ಲಿ ಬರುವ 'ನಾನು' ನಡೆದ ಘಟನೆಗಳಿಗೆ ಸಾಕ್ಷಿ

ಸ್ವರೂಪದ್ದಾಗಿರಬಹುದು ಈ ವಿಭಾಗಕ್ಕೆ ಸೇರುವ ಆದರೂ ಹೆಚ್ಚು ಚರ್ಚೆಗೆ ಒಳಗಾದ ಇನ್ನೆರಡು ಬಗ್ಗೆಯ ನಿರೂಪಣಾ ತಂತ್ರಗಳಿವೆ.

ತನ್ನರಿವಿನ ನಿರೂಪಕ ಹಾಗೂ ಮೋಸಹೋಗುವ ನಿರೂಪಕ, ನಿರೂಪಣೆಯಲ್ಲಿ ಕಥೆಗಾರ ಒಂದೇ ಒಂದು ದೃಷ್ಟಿಕೋನಕ್ಕೆ ಕಟ್ಟು ಬೀಳಬೇಕೆಂದೇನೂ ಇಲ್ಲ.

ಕಥಾ ಸಂವಿಧಾನ : ಸಂವಿಧಾನದ ಯಾವುದೇ ವಿವರಣೆ ಪಾತ್ರ ಮತ್ತು ಕ್ರಿಯೆಯ ಪರಿಕಲ್ಪನೆಗಳೊಂದಿಗೆ ಬೆರೆತುಕೊಂಡೇ ಇರುವುದು ಅನಿವಾರ್ಯ ಹಾಗಾಗಿ ಸಂವಿಧಾನವನ್ನು ತೀರ ಅಮೂರ್ತವಾಗಿಯೋ ಅಥವ ಕೃತಿಯ ಸಾರಾಂಶ ಎಂದೋ ವಿವರಿಸಲು ಸಾಧ್ಯ. ಸರಳವಾಗಿ ಹೇಳುವುದಾದರೆ ನಿರ್ದಿಷ್ಟ ಭಾವನಾತ್ಮಕ ಮತ್ತು ಕಲಾತ್ಮಕ ಪರಿಣಾಮಗಳನ್ನು ಸಾಧಿಸಲು ಕ್ರಿಯೆಗಳನ್ನು ಒಂದು ನಿರ್ದಿಷ್ಟ ವ್ಯವಸ್ಥೆಗೆ ಸಕಾರಣವಾಗಿ ಒಳಪಡಿಸಿ ರಚಿಸಿಕೊಂಡಿರುವ ಅಭಿವ್ಯಕ್ತಿ ವಿನ್ಯಾಸ ಕಥಾ ಸಂವಿಧಾನ ಇಲ್ಲಿ ಕ್ರಿಯೆ ಎಂಬುದು ಶಾಬ್ಧಿಕ ಮತ್ತು ಭೌತಿಕ ಎರಡೂ ಆಗಿರುತ್ತದೆ. ಅಲ್ಲದೆ ಪಾತ್ರಗಳ ವರ್ತನೆ ಮತ್ತು ನೈತಿಕ ಸ್ವಭಾವಗಳನ್ನು ತೀರ್ಮಾನಿಸುವ ವ್ಯಕ್ತ ಪಡಿಸುವ ಅಂಶವೂ ಆಗಿರುತ್ತದೆ. ಕಥಾ ಸಂವಿಧಾನದ ಈ ವಿವರಣೆ ಮತ್ತೊಂದು ಅಂಶದತ್ತ ನಮ್ಮ ಗಮನ ಸೆಳೆಯುತ್ತದೆ. ಕ್ರಿಯೆಯ ವ್ಯವಸ್ಥೆ ಎಂದರೆ 'ಕಾಲದ' ವ್ಯವಸ್ಥೆಯೇ ಮೊದಲು ಏನಾಯಿತು. ಆ ಮೇಲೆ ಏನಾಯಿತು ಇತ್ಯಾದಿಯಾಗಿ ಕಾಲಕ್ರಮದಲ್ಲಿ ಕ್ರಿಯೆಯ ನಿರೂಪಣೆಯೇ ಆಗಿರುತ್ತದೆ. ಇ.ಎಂ.ಫಾರ್ಸ್ಟರ್ ಬಹಳ ಅಚ್ಚುಕಟ್ಟಾಗಿ ವಿವರಿಸುತ್ತಾನೆ. ಘಟನೆಗಳ ಕಾಲಕ್ರಮ ನಿರೂಪಣೆ ಕಥೆಯಾಗುತ್ತದೆ. ಕಾಲಕ್ರಮದೊಡನೆ 'ಕಾರಣವೂ' ಸೇರಿಕೊಂಡರೆ ಅದು ಕಥಾ ಸಂವಿಧಾನವಾಗುತ್ತದೆ. ಅಂದರೆ ಏನಾದ ಮೇಲೆ ಏನಾಯಿತು ಎಂಬುದಷ್ಟೆ ಅಲ್ಲ, ಏನಾದ ಮೇಲೆ ಏನು 'ಏಕೆ ' ಆಯಿತು ಎಂಬುದು ಕಥಾ ಸಂವಿಧಾನ ಕಾಲ, ಕಾರಣ ಎಂಬ ಅಂಶಗಳು ಮೂರನೆಯ ಮುಖ್ಯ ಅಂಶದತ್ತ ಗಮನ ಸೆಳೆಯುತ್ತದೆ. ಪ್ರಪಂಚದ ಬದುಕಿನಲ್ಲಿ ನಡೆಯುವ ಘಟನೆಗಳಿಗೆ ಕಾರ್ಯ ಕಾರಣ ಸಂಬಂಧವಿದೆ. ಎಂಬ ವೈಚಾರಿಕ ವಿನ್ಯಾಸದಲ್ಲಿ ನಂಬಿಕೆ ಇಟ್ಟುಕೊಂಡೇ ಯಾವುದೇ ಕಥಾ ಸಂವಿಧಾನ ಸೃಷ್ಟಿಯಾಗಲು ಸಾಧ್ಯ. ಈ ನಂಬಿಕೆ ಬದಲಾವಣೆಯನ್ನು ಕುರಿತದ್ದು ಕೃತಿಯ ಸಂವಿಧಾನ ರಚಿಸಿಕೊಳ್ಳುವಾಗ ಲೇಖಕನಿಗೆ ಬದುಕು ಚಲನಶೀಲವಾಗಿಯೇ ತೋರುತ್ತದೆ.ಆದ್ದರಿಂದಾಗಿಯೇ ಪಾತ್ರಗಳು ಬದಲಾಗುತ್ತಿರುವ ಸಂದರ್ಭಗಳಲ್ಲಿ ಬದಲಾಗುತ್ತಿರುವ ಬೆಳೆಯುತ್ತಿರುವ ವ್ಯಕ್ತಿಯನ್ನಾಗಿ ನಾವು ಕಾಣುವುದು ಸಾಧ್ಯ. ಈ ಬದಲಾವಣೆ 'ಘರ್ಷಣೆ'ಇಲ್ಲದೆ ಸಾಧ್ಯವಿಲ್ಲ. ಆದ್ದರಿಂದ ಘರ್ಷಣೆಯೂ ಸಂವಿಧಾನದ ಮುಖ್ಯ ಆಶಯವಾಗಿರುತ್ತದೆ. ಈ ಘರ್ಷಣೆಯನ್ನು ಭಾಷೆಯಲ್ಲಿ ಅಭಿವ್ಯಕ್ತಿಸುವಾಗ ಲೇಖಕ 'ಆಶ್ಚರ್ಯ' ಮತ್ತು 'ಕುತೂಹಲ ತುಂಬಿದ ನಿರೀಕ್ಷೆ'ಗಳು ಪ್ರೇಕ್ಷಕ ಅಥವ ಓದುಗನಲ್ಲಿ 'ಸಹಜ'ವಾಗಿ ಮತ್ತು 'ನಂಬುವಂತೆ' ಹುಟ್ಟಿಸಲು

ಪ್ರಯತ್ನಿಸುತ್ತಾನೆ. ಕಥಾ ಸಂವಿಧಾನ ಬಹುತೇಕ ಕೃತಿಗಳಿಗೆ ಬೇಕಾದರೂ, ಎಲ್ಲ ಕೃತಿಗಳಿಗೂ ಉದಾಹರಣೆಗೆ ವಿಚಾರ ಮಂಡನೆಗೆ ಬಳಸುವ ಪ್ರಬಂಧ ಅನಿವಾರ್ಯವಲ್ಲ. 4

ಕಾರ್ವಾಲೊ ಕಾದಂಬರಿಯಲ್ಲಿ ನಿರೂಪಕನ ಅಭಿವ್ಯಕ್ತಿಯಲ್ಲಿ ಸಂಶಯ ತುಂಬಿದ ನಿರೂಪಣೆಯನ್ನು ವಸ್ತು ನಿಷ್ಠವಾಗಿ ಗುರುತಿಸಬಹುದು. ಹಾಗೂ ನಿರೂಪಕ ನೋಡುವ ದೃಷ್ಟಿಕೋನವೇ ಅನುಮಾನಾಸ್ಪದವಾಗಿರುತ್ತದೆ. ಆದರೆ ಕೊನೆವರೆಗೂ ಅವರು ಈ ದೃಷ್ಟಿಕೋನವನ್ನು ಉಳಿಸಿಕೊಳ್ಳುವುದಿಲ್ಲ ಏಕೆಂದರೆ ಸಮಾಜವನ್ನು ನೋಡುವ ಹಾಗೂ ಆ ಸಮಾಜದಲ್ಲಿ ತನಗೆ ಆಗುವ ಅನುಭವಗಳು ನಿರೂಪಕನ ವ್ಯಕ್ತಿತ್ವದಲ್ಲಿ ಉಂಟಾಗುವ 'ಘರ್ಷಣೆ 'ಯಿಂದ ಆ ದೃಷ್ಟಿಕೋನದಿಂದ ಭಿನ್ನವಾಗಿ ಬೇರೆಯಾಗಿಯೇ ತಮ್ಮ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳುತ್ತಾನೆ ನಿರೂಪಕ.

ಕೃತಿಯ ಪ್ರಾರಂಭದಲ್ಲಿ "ಏಳು ಬಾಟಲು ಜೇನನ್ನು ಕೊಳ್ಳಲು ಹೋದ ನನಗೆ ಅವರು ಕೊಡಲಿರುವ ದೊಡ್ಡ ಟಿನ್ ಜೇನು ತುಪ್ಪ ನೋಡಿ ಆಶ್ಚರ್ಯವಾಯ್ತು ! ಖಂಡಿತವಾಗಿಯೂ ಯಾವುದೋ ಕಲಬೆರಕೆ ಮಾಲನ್ನು ನನಗೆ ಟೋಪಿ ಹಾಕಲು ಈ ಘಾಟಿಗಳು ಯತ್ನಿಸುತ್ತಿದ್ದಾರೆಂದು ಸಂದೇಹ ಬಂತು, ಆದರೆ ಯಾವುದನ್ನು ಕಲಬೆರಕೆ ಮಾಡಿಯಾರು? ಜೋನಿಬೆಲ್ಲ, ಸಕ್ಕರೆ ಪಾಕ, ಒಳ್ಳೆಗೆ ಯಾವುದೂ ಇದಕ್ಕಿಂತ ಅಗ್ಗವಾಗಿ ಟಿನ್‌ಗೆ ಎಪ್ಪತ್ತೆಂಟಕ್ಕಿಂತ ಕಡಿಮೆ ಇರಲಾರದು!"[5] ಎಂದು ತನ್ನದೇ ಆದ ದೃಷ್ಟಿಕೋನದ ಮೂಲಕ ವ್ಯಕ್ತಿಯನ್ನು ಅಳೆಯುತ್ತಾನೆ. ಆದರೆ ಇದು ಇನ್ನೂ ಅನೇಕ ವಲಯಗಳಿಗೆ ಆವರಿಸಿತ್ತು. ನಿರೂಪಕನ ಮುಂದೆ ಇರುವ ಸಮಾಜದಲ್ಲಿನ ಜನಜೀವನ, ಜೇನು, ವ್ಯವಸಾಯ ಮತ್ತು ತನ್ನ ಜೀವನ ಕ್ರಮಕ್ಕಿಂತ ಅತ್ಯಂತ ಭಿನ್ನವಾಗಿ ವ್ಯಂಗ್ಯ ಉಪೇಕ್ಷೆಗಳ ಮೂಲಕವೇ ಗುರ್ತಿಸುತ್ತಾರೆ.

ಮೂಡುಗೆರೆ ಜೇನು ಸೊಸೈಟಿಯ ಹೊರಗಿನ ಬೋರ್ಡಿನಲ್ಲಿ ಬರೆದಿದ್ದ "ಜೇನು ಪೋಶಕದ ಸಹಕಾರಿ ಸಂಘ" ಎಂಬ ಬರಹದಲ್ಲಿ 'ಷ' ಇರಬೇಕೋ 'ಶ' ಇರಬೇಕೋ ಎಂದು ಯೋಚಿಸುವುದು.[6]

"ಜೇನಿನ ಬಗ್ಗೆಯಾಗಲಿ ಜೇನು ಹುಳುಗಳ ಬಗ್ಗೆಯಾಗಲಿ ಆಗ ನನಗೆ ಅಷ್ಟೊಂದು ತಿಳುವಳಿಕೆ ಇರಲಿಲ್ಲ ಸ್ಥೂಲವಾಗಿ ನಾನು ಊಹಿಸಿದ್ದು ಅದು ಮಾನವನ ಮೊದಲ ಶತ್ರು. ಹಾವಿನಂತೆಯ ಮಾನವನನ್ನು ಕಚ್ಚಲು ಕೊಲ್ಲಲು ಯತ್ನಿಸಿದ ಕೀಟ ಎಂದಷ್ಟೇ.[7]"ಮಂದಣ್ಣ ಕರ್ವಾಲೊರವರು ತಮ್ಮ ಗುರುಗಳು ಎಂದಾಗ ನಿರೂಪಕ ನಂಬಲಾಗಲಿಲ್ಲ. ಈ ಮಂಗ

ಮಂದಣ್ಣನೂ ತನ್ನ ಹೆಡ್ಡತನ ಮಂದ ಬುದ್ಧಿಗಳನ್ನು ಮುಚ್ಚಿಕೊಳ್ಳಲು ತನ್ನ ಗುರು ಕರ್ವಾಲೊ ಎಂದು ಹೇಳುತ್ತಿದ್ದನೆಂದು ತಿಳಿದೆ."[8] .

"ತಮ್ಮ ತಾಲೂಕಿನಲ್ಲೆ ಪ್ಯಾರ ಮೊದಲ ದರ್ಜೆಯ ಅವಿವೇಕಿ ಎಂಬ ತನ್ನ ಊಹೆ ಅವನ ಮಾತಿನಿಂದ ಇನ್ನೂ ಬಲವಾಯಿತು." ಈ ಮೇಲೆ ವಿವರಿಸಲಾದ ಉದಾಹರಣೆಗಳು ನಿರೂಪಕ ತನ್ನ ಸುತ್ತಲಿನ ಸಮಾಜವನ್ನು ನೋಡುತ್ತಿದ್ದ ದೃಷ್ಟಿಕೋನಕ್ಕೆ ಅವನ ಅಭಿವ್ಯಕ್ತಿ ಬೆಳೆಯುತ್ತದೆ. ಇದು ಒಂದು ರೀತಿಯಾದ ದೃಷ್ಟಿಕೋನವಾದರೆ ಮತ್ತೊಂದು ರೀತಿಯ ದೃಷ್ಟಿಕೋನ ಪ್ರತಿಯೊಂದನ್ನು ಹಣದ ದೃಷ್ಟಿಯಿಂದ ಹಾಗೂ ಲಾಭದ ದೃಷ್ಟಿಯಿಂದ ನೋಡುವುದು. "ವ್ಯವಸಾಯದಿಂದ ಲಾಭ ಬರುವುದೆಂದು ನಂಬಿಕೆ ನನ್ನೊಳಗೆ ನಶಿಸತೊಡಗಿತ್ತು. ಲಾಭ ಮಾಡುವುದಿರಲಿ ಬ್ಯಾಂಕಿನಲ್ಲಿ ಮಾಡಿಕೊಂಡ ಸಾಲದ ಬಡ್ಡಿ ಕಟ್ಟುತ್ತಾ ಹೆಚ್ಚು, ಕಡಿಮೆ ಅಧಿಕಾರಶಾಹಿಯ ಜೀತದಾಳಾಗಿ ನಾನೂ ನನ್ನಂಥ ಅನೇಕ ರೈತರೂ ಪರಿವರ್ತಿತರಾಗಿದ್ದರು, ಹಾಕಿದ ಲೆಕ್ಕಚಾರ ಒಂದು ಗುರಿ ತಲುಪುತ್ತಲೇ ಇರಲಿಲ್ಲ. ಹೀಗಾಗಿ ಸದಾ ಮುಂದೆ ಸಿಕ್ಕುವ ಲಾಭದ ಮರೀಚಿಕೆಯ ಹಿಂದೆ ಆರ್ಥಿಕ ಬಿಕ್ಕಟ್ಟಿನ ಮರಳುಗಾಡಿನಲ್ಲಿ ಸಾಗುತ್ತಿದ್ದೆ...

ಸದಾ ಲೆಕ್ಕಚಾರ, ಗುಣಾಕಾರ, ಭಾಗಾಕಾರ ಹಾಕುತ್ತಾ, ಬಡ್ಡಿ, ಸಾಲ ಇವುಗಳನ್ನು ಮೆಲುಕುತ್ತಾ ನನಗೆ ಆರ್ಥಿಕ ಸ್ವಾತಂತ್ರ್ಯ ಬರುವ ಹೊತ್ತಿಗೆ ಎಷ್ಟು ಮುದಿಯನಾಗಿರುತ್ತೆನೆ. ಡಯಾಬಿಟೀಸ್, ರಕ್ತದ ಒತ್ತಡ ಇತ್ಯಾದಿ ಯಾವ, ಯಾವ ಕಾಯಿಲೆಗಳು ಆರಂಭವಾಗಿರುತ್ತವೆ! ಎಂದು ಯೋಚಿಸುತ್ತಾ ಕೊರಗುತ್ತಿದ್ದೆ. ಆದ್ದರಿಂದ ಈ ತೋಟವನ್ನೊಮ್ಮೆ ಮಾರಿದರೆ ಈ ನಿರುತ್ಸಾಹದ ಶರಧಿಯನ್ನು ದಾಟಿಯಂತೆ ಎಂಬ ನಿರ್ಧಾರಕ್ಕೆ ಬಂದಿದ್ದೆ. 9

ನಾರ್ವೆ ರಾಮಯ್ಯನಿಗೆ ನಾವೆಲ್ಲ ಸೇರಿ ಹಳ್ಳಿಮುಕ್ಕ ಮಂದಣ್ಣನಿಗೆ ಮದುವೆ ಮಾಡಿಸಲು ಹೊರಟಿರುವುದನ್ನು ನೋಡಿ ಆಶ್ಚರ್ಯವಾಯಿತು ಹಾಗೇ ಸಂಶಯವೂ ಆಗಿರಬಹುದು. "ಅಲ್ಲಾ ಸ್ವಾಮಿ ಹುಳ ಹುಪ್ಪಟೆ ಹಿಡಿದುಕೊಂಡು ಬೀದಿ ತಿರುಗ್ತಾ ಇದ್ದಾನೆ ಅವ ನಿಮಗೇನೋ ಭಾಳ ಬೇಕಾದೋನಿರಬಹುದು ಆದರೆ ನಿಮಗೇನು ಫಾಯಿದೆ ಹೇಳಿ ಅದರಿಂದ, ಇವ ಹುಳ ಹುಪ್ಪಟೆ ಮಂಗ ಮುಸಿಯಾಂತ ಕಾಡು ತಿರುಗ್ತಾ ಸಾಹೇಬ್ರಿಗೆ ಸಪ್ಲೇ ಮಾಡ್ತಿದ್ದರೆ ನನ್ನ ಮಗಳು ಹೊಟ್ಟೆಗೆ ತಣ್ಣೀರು ಹುಯ್ಕೋ ಬೇಕಾಗುತ್ತೆ."[10] ಎಂದು ಕೇಳಿದಾಗ ನಿರೂಪಕ "ರಾಮಯಯ್ಯ, ಹುಳ ಹುಪ್ಪಟೆ ವಿಚಾರ ತಿಳಿಯಬೇಕಾಂತನೆ ಕರ್ವಾಲೋರಿಗೆ ಸರ್ಕಾರ ಸಾವಿರದೈನೂರು ರೂಪಾಯಿ ಸಂಬ್ಳ ಕೊಡ್ತಿದೆ ಅದನ್ನು ನೀನು ಅಷ್ಟೊಂದು ಉದಾಸೀನಮಾಡಿ ನೋಡಬೇಡ. ಅದಿರಲಿ, ನಿನ್ನ ಏಲಕ್ಕಿ

ತೋಟಕ್ಕೆ ಹುಳು ಬಿದ್ದು ದರಿದ್ರ ಹಿಡಿದು ಪಾಪರಾಗಿ ತಾನೇ ನಾರ್ವೆ ಬಿಟ್ಟು ಇಲ್ಲಿಗೆ ಬಂದದ್ದು ಅದನ್ನ ಮರೆತೇಬಿಟ್ಟೆಯಾ"[11] ಹೀಗೆ ಬದುಕಿನ ಕ್ರಮದಲ್ಲಿ ಹಣ, ಲಾಭ , ಫಾಯಿದೆ ದೃಷ್ಟಿಯಿಂದಲೆ ನೋಡುವುದನ್ನು ಕೃತಿ ರಚಿಸಿಕೊಂಡಿದೆ. ವ್ಯವಸಾಯದ ಜೀವನ ಮುಂದೆ ವೃತ್ತಿಯಾಗಿ ಜೀವನ ಶೈಲಿಗೆ ಒಗ್ಗಿಕೊಳ್ಳುತಿರುವಾಗ ಎಲ್ಲವೂ ಲೆಕ್ಕಾಚಾರದ ಬದುಕಿಗೆ ತೆರೆದುಕೊಳ್ಳುತ್ತಿದೆ. ಕೈ ತುಂಬ ಹಣ ಬೇಕು ಹಾಗೂ ಇರಬೇಕು ಎನ್ನುವ ಧೋರಣೆ ನಾರ್ವೆರಾಮಯ್ಯನಲ್ಲಿಯೂ ಇರುವುದನ್ನು ಗಮನಿಸಬಹುದಾಗಿದೆ. ಆದರೆ ಈ ಹಣವೇ, ಹಣದಿಂದಲೇ ಜಗತ್ತನ್ನು ಅಳೆಯಲು ಹೊರಟಿದೆ ಹಣವಿದ್ದರೆ ಮರ್ಯಾದೆ ಇಲ್ಲದಿದ್ದರೆ ಇಲ್ಲ ಎನ್ನುವ ಸಮಾಜದ ನಂಬಿದೆ ಇಲ್ಲಿ ಮೂಡಿಬರುತ್ತಿದೆ. ಅಂದರೆ ನಮ್ಮ ಸಾಂಪ್ರದಾಯಿಕ ಜಗತ್ತು ತನ್ನದೆ ಆದ ಆದರ್ಶಗಳಿಗೆ ನಂಬಿಕೆಗಳಿಗೆ ಅರ್ಪಿಸಿಕೊಂಡಿದ್ದ ಮನುಷ್ಯ ಹಣದ ಆಸೆಗೆ ಹಣತಂದು ಕೊಡುವ ಅಧಿಕಾರ ಮರ್ಯಾದೆಗೆ ಯಾವಾಗ ತನ್ನನು ತಾನೇ ಅರ್ಪಿಸಿಕೊಂಡನೋ ಅಲ್ಲಿಂದ ಮನುಷ್ಯನಿಗೆ ಹಣವೇ ಮುಖ್ಯ ಹಣದಿಂದ ಬರುವ ಲಾಭವೇ ಮುಖ್ಯವಾಗಿ ಪರಿಗಣಿಸುತ್ತದೆ. ಹಣವಿದ್ದರೆ ಪ್ರೀತಿ, ಆದರ್ಶ ಎಲ್ಲಿಲ್ಲದ ಸಲಿಗೆ ಕಾಣಿಸಿಕೋಳ್ಳುತ್ತದೆ ಅದೇ ಹಣವಿಲ್ಲದಿದ್ದರೆ ಕಣ್ಣಿದ್ದರೂ ಕುರುಡುತನ ಬರುತ್ತದೆ. ಆದ್ದರಿಂದಲೇ ಹಣವೇ ಇಂದಿನ ಬದುಕನ್ನು ಆಳುತಿರುವ ವಸ್ತುವಾಗಿದೆ. ಇದು ಬರೀ ನಿರೂಪಕನ ದೃಷ್ಟಿಕೋನ ಮಾತ್ರವೇ ಆಗಿರದೆ ಅಲ್ಲಿನ ಬದುಕಿನ ಧೋರಣೆಯೂ ಆಗಿದೆ. ಆದರೆ ಗ್ರಾಮೀಣ ಜಗತ್ತಿನಲ್ಲಿ ಹಣದ ಮೂಲಕವೇ ತಮ್ಮ ಬದುಕನ್ನು ನೋಡುವ ಪರಿ ಇರಲಿಲ್ಲ ಆದರೆ ಇಂದಿನ ಜಾಗತಿಕ ಮಟ್ಟದಲ್ಲಿ ಗ್ರಾಮೀಣ ಬದುಕು ಸಹ ಇಂತಹ ನೋಟಕ್ರಮವನ್ನು ತನ್ನಲ್ಲಿಯೇ ಅರಗಿಸಿಕೊಳ್ಳತ್ತಿರುವ ಕ್ರಮ ಹಾಗೂ ನಗರದ 'ಹಣ'ದ ಜಗತ್ತು ಗ್ರಾಮೀಣ ಪ್ರದೇಶದ ಒಳಗೂ ಪ್ರವೇಶಿಸುವುದರ ಮೂಲಕ ಅಲ್ಲಿನ ಬದುಕಿನ ಕ್ರಮದಲ್ಲಿಯೂ ಹಣದ ಮೂಲಕವೇ ತಮ್ಮ ಬದುಕನ್ನು ರೂಪಿಸಿಕೊಳ್ಳುವುದರೊಳಗೆ ನಿರೂಪಕ, ಮಂದಣ್ಣ, ನಾರ್ವೆ ರಾಮಯ್ಯ– ಇವರು ಯಾರೂ ಅದರಿಂದ ಹೊರತಾಗಿ ಉಳಿಯುತ್ತಿಲ್ಲ. ಹೀಗೆ ತನ್ನದೇ ಉದ್ದೇಶಗಳಿಗೆ ಬದುಕನ್ನು ಪರಿವರ್ತಿಸಿಕೊಳ್ಳಲು ಹವಣಿಸುತ್ತಿರುವ ಹಂತದಲ್ಲಿ ಅವರ ಕೈಗೆ ಆಶಿಸಿದ್ದು ಸಿಗದೆ ಕಿರಿಕಿರಿ ಅನುಭವಿಸುತ್ತಾ ಹೋಗುತ್ತಾರೆ. ಮಂದಣ್ಣನಿಗೆ ಸುತ್ತಲಿನ ಕಾಡು "ಬರೀ ಮಳೆ, ಕಾಡು, ನೆತ್ತರು ಹೀರೋ ಜಿಗಣೆ, ನಮ್ಮ ಭತ್ತ ಲೂಟಿ ಮಾಡೋ ಕಾಡು ಹಂದಿಗಳು" ಇರುವ ತಾಣವಾಗಿ ಕಾಣುತ್ತದೆ. ಆದರೆ ಕರ್ವಾಲೊರವರಿಗೆ ಅದರಲ್ಲಿ ಅದ್ಭುತ ತುಂಬಿರುವ ತನ್ನ ನಿಗೂಢವನ್ನು ಯಾರಿಗೂ ತಿಳಿಸದ ಕಾಡು, ಅರಣ್ಯ ಅದರೊಳಗೆ ತಿಳಿದುಕೊಳ್ಳಬೇಕಾದ ಅಚ್ಚರಿ ಮೂಡಿಸುವ ಕುತೂಹಲದ ಆಗರವಾಗಿ ಕಾಣುತ್ತದೆ, ಮತ್ತು ಅದಕ್ಕೆ ತಕ್ಕಂತೆ ಪ್ರತಿಯೊಂದನ್ನು ನೋಡುವುದು ಅಧ್ಯಯನದ ಮಾದರಿಯಲ್ಲಿದೆ. ಕರ್ವಾಲೋರ ವಿಶೇಷ ವ್ಯಕ್ತಿತ್ವವೆಂದರೆ ತಮ್ಮ ಅಧ್ಯಯನಕ್ಕೆ ಮಾನವೀಯತೆಯ ಅಂಶ ಸೇರಿಸಿ ಅದನ್ನು ಜೀವಂತಗೊಳಿಸುವುದು ಈ ದೃಷ್ಯ ಜಗತ್ತನ್ನು

ನೋಡುವುದರಲ್ಲಿಯೂ ಪ್ರಭಾವ ಬೀರಿ ಅದನ್ನು ಅರ್ಥೈಸಿಕೊಂಡು ಅದರ ಪ್ರಭಾವಕ್ಕೆ ನಿರೂಪಕನೂ ಸೇರುತ್ತಾನೆ. ಕರ್ವಾಲೋರವರ ವೈಜ್ಞಾನಿಕ ದೃಷ್ಟಿಯ ಕಾರ್ಯ ಕಾರಣ ಸಂಬಂಧವನ್ನು ಒಳಗೊಂಡಂತೆ ಅಲ್ಲಿನ ಮಾನವ ಸಮಾಜವನ್ನೂ ಆವರಿಸುತ್ತದೆ. ಅಂದರೆ ಅಳೆಯುವ ಮಾನದಂಡವು ಗೋಚರ ವಿಶ್ವದಿಂದ ಅದರಲ್ಲಿನ ಅಗೋಚರತೆಯನ್ನು ಗುರ್ತಿಸಲಾರಂಭಿಸುತ್ತದೆ. ನಮ್ಮ ಪಾರಂಪರಿಕ ಸಮಾಜದಲ್ಲಿ ಅಗೋಚರ ಶಕ್ತಿಯು ತನ್ನದೇ ಆದ ವಿಶಿಷ್ಟ ಕ್ರಮದೊಡನೆ ಇರುವುದನ್ನು ಕಂಡುಕೊಳ್ಳುತ್ತಾರೆ. ಆದರೆ ವಿಶೇಷತೆ ಎಂದರೆ ಪರಂಪರೆಯ ಹೊರಗಿನಿಂದ ನೋಡಿಯೂ ಅದರೊಳಗಡೆ ಪ್ರವೇಶ ಪಡೆದದ್ದು, ಒಂದು ಜೀವನ ಕ್ರಮದೊಳಗೆ ಬದುಕಿಯೂ ನಿರೂಪಕನಿಗೆ ಸಾಧ್ಯವಾಗದ್ದು ಕರ್ವಾಲೋರಿಗೆ ಆಗುತ್ತದೆ "ಉಪಯೋಗಕರ" ಎಂಬ ಗ್ರಾಹಕ ದೃಷ್ಟಿಯಿಂದ ಹೊರಬಂದಾಗ ಕಾಣಿಸುವ ಕುತೂಹಲಕರ ಅಂಶವು ವಸ್ತುವಿನ ವಿಶಿಷ್ಟತೆಯನ್ನು ಗ್ರಹಿಸಲು ಸಾಧ್ಯವಾಗುತ್ತದೆ ಎಂಬ ನೋಟ ಕರ್ವಾಲೋರಿಂದ ಸಿಕ್ಕುತ್ತದೆ. ಆ ದೃಷ್ಟಿಯ ಹಿಂದಿನ ಉದ್ದೇಶವೆಂದರೆ ವಿಜ್ಞಾನಿಯಾದ ಕರ್ವಾಲೋರದ್ದು ಶುದ್ಧ ಜ್ಞಾನದ ಮಾದರಿಯೇ ಹೊರತು ಜ್ಞಾನವನ್ನು ವ್ಯಾಪಾರೀಕರಣಗೊಳಿಸುವ ಆಲೋಚನೆಯದ್ದಲ್ಲ. ಶುದ್ಧ ಜ್ಞಾನವು ವ್ಯಾಪಾರೀಕರಣಗೊಳ್ಳದ ಹಂತದಲ್ಲಿ ತನ್ನೊಡನೆ ಮಾನವೀಯತೆಯನ್ನು ಒಳಗೊಂಡಿರುವಂತದ್ದು. ಹೀಗಾಗಿ ಕರ್ವಾಲೋ ಹೊರಗಿನಿಂದ ಬಂದು ಪರಿಸರವನ್ನು, ಪಾರಂಪರಿಕ ಸಮಾಜವನ್ನು ವಿಶಿಷ್ಟ ಬಗೆಯಿಂದ ನೋಡಿದರೂ ಅದನ್ನು ಅರ್ಥೈಸಿಕೊಳ್ಳುವ ಕ್ರಿಯೆಯಲ್ಲಿ ಹೊರಗಿನವರಾಗದೆ "ಮಾನವೀಯ ಸಂವೇದನೆ" ಎಂಬ ನೆಲೆಯಲ್ಲಿ ಸಾರ್ವಕಾಲಿಕವಾಗಿ, ದೇಶ, ಕಾಲಾತೀತವಾಗಿ ನಿಲ್ಲುತ್ತಾರೆ.

ಒಂದು ಪಾರಂಪರಿಕ ಸಮಾಜವನ್ನು ನೋಡುವ ದೃಷ್ಟಿಯು ತನ್ನ ಸಂಕುಚಿತತೆಯನ್ನು ಕಳಚಿಕೊಂಡು, ಇರುವ ಕ್ರಮದೊಳಗೆ ಕಟ್ಟುವ ಸಾಧ್ಯತೆಗಳ ಅನ್ವೇಷಣೆಯನ್ನು ಆರಂಭಿಸಿತು ತನ್ನಿಂದ, ತನ್ನ ಆಲೋಚನೆಗಳಿಂದ ಇದುವರೆಗಿನ ಬದುಕಿನ ಮಾದರಿಗಳಿಂದ ಹೊರಬಂದು ಸಹನೆ, ತಾಳ್ಮೆಯ ದೃಷ್ಟಿ ಬೆಳಸಿಕೊಂಡಿದ್ದು ಕರ್ವಾಲೋರಿಂದ ಕಲಿತ 'ಕಣ್ತೆರೆದು' ನೋಡುವ ಕ್ರಿಯೆಯ ತನ್ನೊಡನೆ ಸಹನೆಯ ಅಂಶವನ್ನೂ ಒಳಗೊಂಡು ಬೆಳೆಯಿತು. ಕರ್ವಾಲೋರ ಸಂಬಂಧ ಬೆಳೆದು ತನ್ನ ಸುತ್ತಲಿನ ಜನ, ಪರಿಸರದ ಬಗೆಗಿನ ವ್ಯಂಗ್ಯ ಉಪೇಕ್ಷೆ ಕಡಿಮೆಯಾಗಿ ನಿರೂಪಕನಿಗೆ ಜೀವನದ ಮೇಲೆ ಪ್ರೀತಿ ಬೆಳೆದದ್ದು ಹಾವು ಗೊಲ್ಲರ ಎಂಕ್ಟ, ಕರಿಯಪ್ಪ, ಮಂದಣ್ಣ ಇಂತಹ ಅವಿವೇಕಿ ದಡ್ಡ ಜನಗಳಲ್ಲಿಯೂ ವಸ್ತು ನಿಷ್ಠತೆಯನ್ನು ಸಾಧಿಸುವುದಕ್ಕೆ ಉಪಯೋಗಿಸಲ್ಪಟ್ಟಾಗ ಮಾತ್ರ ಸಾರ್ಥಕವಾಗುತ್ತದೆ.

ಕರ್ವಾಲೋ ಕೃತಿ ಬೆಳವಣಿಗೆಯಲ್ಲಿ ಸಾಂಕೇತಿಕವನ್ನು ಮೀರಿ ಪ್ರತಿಮೆಯ ಕಡೆಗೆ ಅದು ಚಲಿಸುವುದನ್ನು ಗುರ್ತಿಸಬಹುದು. ಏಕೆಂದರೆ ಕರ್ವಾಲೋ ಹೇಳಿದ ಅಂಶಗಳನ್ನು ಒಳಗೊಂಡ ಹಾರುವ ಓತಿಯನ್ನು ಹಿಡಿಯಲು ಹೋದಾಗ ಅದು ಸಿಗದೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ತನ್ನ ರೆಕ್ಕೆ ಬಿಚ್ಚಿ ಹಾರುವ ಓತಿ ಯಾರ ಕೈಗೆ ಸಿಗದೆ ಹೋಗುತ್ತಿದೆ. ಕರ್ವಾಲೋ ಒಮ್ಮೆ ನಿಟ್ಟುಸಿರು ಬಿಟ್ಟು "ಹೋಗಲಿ ಬಿಡಿ ಬ್ಯಾಡ್ ಲಕ್. ಆದರೆ ಏನೂ ಬೇಸರವಿಲ್ಲ" [12]ಎಂದರು. ನಿಜಕ್ಕೂ ನಮಗಾರಿಗೂ ಅಷ್ಟೊಂದು ಬೇಸರವೇನೂ ಆಗಿರಲಿಲ್ಲ. ಕಾಲ, ದೇಶದ ಆಚೆಗಿನ ಯಾವುದೋ ವಿಸ್ಮೃತಿಯ ತುಣುಕು ನಮ್ಮೆದುರು ಮಿಂಚಿ ಮತ್ತೆ ಅದೇ ವಿಸ್ಮೃತಿಯಲ್ಲಿ ಲೀನವಾಗಿ ಹೋಯಿತು. ಎಂದಾಗ ಇಡೀ ಕೃತಿಯಲ್ಲಿ ಈ ಹಾರುವ ಓತಿ ಸಂಕೇತವನ್ನು ಬಿಟ್ಟು ಕೊಟ್ಟು ಪ್ರತಿಮೆಯಾಗಿ ಕೃತಿಯಲ್ಲಿ ಗೋಚರಿಸುತ್ತದೆ.

"ಹಾರೋ ಪ್ರಯತ್ನದಲ್ಲಿ ಅದು ತಪ್ಪು ದಾರಿ ಹಿಡೀತು ಅಂತ ಕಾಣ್ತದೆ ಕೈಗಳ ಬದಲು ಪಕ್ಕೆ ಉಪಯೋಗಿಸಿಕೊಂಡಿದೆ. ಅದಕ್ಕೇ ಅದು ಹಾಗೇ ಉಳೀತು. ಮಿಕ್ಕವು ರೆಕ್ಕೆ, ಪುಕ್ಕ ಬೆಳೆಸಿಕೊಂಡು ಹಕ್ಕಿ ಆಗಿ ಬಿಟ್ಟವು ಅವನತಿಯ ಅಂಚಿನಲ್ಲಿರುವ ಹಾರುವ ಓತಿ ಪ್ರಕೃತಿಯ ಒಡಲಿನಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವು ಕೊನೆಯಲ್ಲಿ ಅದು ಕೈಗೆ ಸಿಗದೆ ಹಾರಿ ಹೋಗುವು ಇದೆಲ್ಲವೂ ಕೃತಿಯಲ್ಲಿ ಪ್ರತಿಮೆಯ ಸಾಲಿಗೆ ಹಾರುವ ಓತಿ ನಿಲ್ಲುವುದನ್ನು ಗಮನಿಸಬಹುದಾಗಿದೆ.

ತನ್ನ ಸುತ್ತಮುತ್ತಣ ಪರಿಸರದಲ್ಲಿಯೇ ಇದ್ದು ಆ ಪರಿಸರದ ಒಳಗೆ ಇರುವ ಅದ್ಭುತಗಳನ್ನು ನೋಡಲು ಸಾಧ್ಯವಾಗದ ನಿರೂಪಕನಿಗೆ ತನ್ನ ಮನಸ್ಸಿನ ಅಥವಾ ದೇಹದ ಹೊರಗೆ ಇರುವ ವಿಶಿಷ್ಟವಾದ ಅನುಭವಗಳಲ್ಲಿ ಹುದುಗಿಸಿಕೊಂಡಿರುವ ಜ್ಞಾನ ಮಾರ್ಗ ತೆರೆಯುವುದಕ್ಕೆ ಕರ್ವಾಲೋರಂತವರು ಅವರಿಗೆ ಬೇಕಾಯಿತು ಏಕೆಂದರೆ ದಿನ ನಿತ್ಯದ ಪರಿಸರ ನೋಡುವುದಕ್ಕೂ, ಆ ಪರಿಸರದಲ್ಲಿ ನಮಗೆ ತಿಳಿಯದ ಏನೋ ಒಂದು ಅದ್ಭುತವಿದೆ ಎಂದು ತಿಳಿದು ನೋಡುವುದಕ್ಕೂ ವ್ಯತ್ಯಾಸವಿದೆ. ಏಕೆಂದರೆ ತಿಳಿದ ಪರಿಸರಕ್ಕಿಂತ ಭಿನ್ನವಾದ ಅಗೋಚರವಾದ, ತಿಳಿಯಬೇಕಾದ ಜ್ಞಾನ ಸಂಪತ್ತು, ತಿಳಿಯುವಿಕೆಯಿಂದ ಹೊರಗಿದೆ. ಅದನ್ನು ನೋಡಲು ಆ ಪರಿಸರನ್ನು ಅರ್ಥ ಮಾಡಿಕೊಳ್ಳಲು ಕರ್ವಾಲೊರಂತವರಿಗೆ ಸಾಧ್ಯವಾಗಬಹುದು. ಆದರೆ ನಿರೂಪಕರಂತವರಿಗೆ ಬೇರೆಯವರ ಸಹಾಯ ಬೇಕಾಗುತ್ತದೆ. ಮಂದಣ್ಣ ಎಂಗ್ಟರಂತವರಿಗೆ ಆ ಕಾಡೇ ದಿನ ನಿತ್ಯದ ಬದುಕಿನ ಕ್ರಮ ವಾದರಿಂದ ಆ ಕಾಡಿನ ಜೊತೆಯಲ್ಲಿಯೇ ಬೆರೆತುಕೊಂಡು ನಡೆದಿದ್ದರಿಂದ ಅವರಿಗೆ ಅರಣ್ಯವೆಂದರೆ ಅದರಲ್ಲಿರುವ ಅದ್ಭುತವೆಂದರೆ ಅದು ಅವರಿಗೆ ಆಶ್ಚರ್ಯದ ಸಂಗತಿ ಆಗದೆ ಹೋಗಬಹುದು. ಆದರೆ ಮಂದಣ್ಣನ ಸಹಾಯ ಪಡೆದ ತಿಳುವಳಿಕೆ ಇರುವ ಕರ್ವಾಲೊ ಕಾಡು, ಅರಣ್ಯವನ್ನು ಇವರು ಗ್ರಹಿಸಿದ್ದಕ್ಕಿಂತ ಭಿನ್ನವಾಗಿ ಅದ್ಭುತಗಳನ್ನು ತನ್ನ

ಗರ್ಭದಲ್ಲಿಯೇ ಹುದುಗಿಸಿಕೊಂಡಿರುವ ಆಗರವಾಗಿ ಕಾಣುತ್ತಾರೆ "ಅತ್ಯಂತ ಕ್ಷುದ್ರವಾದುದನ್ನು ಸಾಮಾನ್ಯವಾದುದನ್ನೆಲ್ಲಾ ಪರಮಾದ್ಭುತ ಮತ್ತು ಅತಿ ಮುಖ್ಯ ಎಂದು ನಂಬಿದ್ದಾರೆಂದು."[13] ನಿರೂಪಕ ಹೇಳುವ ಮಾತಾಗಿದೆ. ಅದೇ ರೀತಿಯಾಗಿ ಪ್ರಭಾಕರ ಹಾಗೂ ನಿರೂಪಕ ಮಾತನಾಡುತ್ತ

"ಅಲ್ಲಯ್ಯ ಪ್ರಭಾಕರ, ಕರ್ವಾಲೊ ನಮ್ಮಿಂದ ಏನೋ ಮಹತ್ತರ ಕೆಲಸ ಆಗಬೇಕಾಗಿದೆ ಅನ್ನುತ್ತಾರಲ್ಲಯ್ಯ ಈ ನೂರೆಂಟು ರಗಳೆಗಳಿಂದ ಎಂದೋ ನಾನು ದೂರಾಗಿ ಬಿಡ್ತಿದೆ ಕಣಯ್ಯ, ಈ ಕರ್ವಾಲೊ ಒಬ್ರು ಇಲ್ದಿದ್ರೆ"[14] ಎಂದೆ. ಇದಕ್ಕೆ ಪ್ರತಿಕ್ರಿಯೆಯಾಗಿ ಪ್ರಭಾಕರ ಈ ರೀತಿಯಾಗಿ ಹೇಳುತ್ತಾನೆ "ಅಯ್ಯೋ ನಂಗೂ ಹಂಗೇ ಹೇಳಿದರು ಸಾರ್, ಅವರ ಸ್ವಭಾವನೇ ಹಾಗೆ ಎಲ್ಲಕ್ಕೂ ತೆರಗಾಗಿ ಭಾರಿ ಮುಖ್ಯಾಂತಾರೆ. ಆ ಗ್ಲೋವರ್ಮ್ ಅಂತ ದೀಪ ಬಿಡೋ ಹುಳು ತರೋದಕ್ಕೆ ನಾರ್ವೆಗೆ ಹೋಗಿದ್ದರು. ಅವರಿಗೇನು ಹೇಳೋಣ ಹೇಳಿ? ಅವರನ್ನು ಕೇಳಿದರೆ ಒಂದು ಹುಳುನ ಪರಮಾತ್ಮನ ಅವತಾರಾಂತಾರೆ! ಅವರಿಗೆ ಇವೆಲ್ಲಾ ಗೊತ್ತಾಗೋಲ್ಲ. ಅಂತ ನಾವುತಿಳಿದೋರು ಅವರನ್ನು ದುರುಪಯೋಗ ಮಾಡಿಕೊಳ್ಳಬಾರದು"[15] ಎಂದು ಹೇಳಿದ. ಇದರ ಮೂಲಕ ತಿಳಿಯುವುದೇನೆಂದರೆ ಪರಿಸರ ಪ್ರಕೃತಿಯ ಪರಿಚಯ ಹಾಗೂ ಅಧಿಕ ಅದ್ಭುತ ತಿಳಿದವರು ಒಂದು ಕಡೆ. ಅದೇ ಪರಿಸರದಲ್ಲಿಯೇ ಇದ್ದು ಆ ಪರಿಸರದ ಬದುಕಿನ ಕ್ರಮವನ್ನು ಒಳ ಹೊಕ್ಕು ನೋಡಿದ ಅವರ ಅರಿವಿಗೆ ನಿಲುಕದ ಅದ್ಭುತ ಪರಿಸರ, ಪ್ರಕೃತಿಯನ್ನು ನೋಡುವ ಇನ್ನೊಂದು ಕಡೆ ಇದ್ದಾರೆ ತಿಳಿದವರಿಗಿಂತ, ತಿಳಿಯದೆ ಇರುವವರ ಮಾತು ಕರ್ವಾಲೋರವರ ವ್ಯಕ್ತಿತ್ವವನ್ನು ಬೇರೆಯಾಗಿಯೇ ಗ್ರಹಿಸಲಾಗುತ್ತದೆ ಹೇಗೆ ತಿಳಿಯದವರಿಗೆ ಆ ಅದ್ಭುತದ ಅರಿವು ನೀಡಿದಾಗ ಅವರಲ್ಲಿಯೇ ಅವರ ವ್ಯಕ್ತಿತ್ವ ಬದಲಾಗುವಿಕೆಯನ್ನು ಗಮನಿಸುಬಹುದಾಗಿದೆ. ನಿರೂಪಕ ತಾನು ಬೆಳೆದ ಪರಿಸರ ಪ್ರಕೃತಿಯಲ್ಲಿ ಇರುವ ವಿಶೇಷಗಳನ್ನು 'ಕಣ್ತೆರದು' ನೋಡುವ ಹಾಗೆ ಪರಿಚಯಿಸಿದವರು ಕರ್ವಾಲೋ. ಮಂದಣ್ಣ ಇರುವ ಸಮಾಜದಲ್ಲಿಯೇ ಅವನ್ನು ಅವನಲ್ಲಿ ಇರುವ ಪ್ರತಿಭೆಯನ್ನು ಅದೇ ಸಮಾಜದಲ್ಲಿರುವ ನಿರೂಪಕನ್ನು ಕಂಡು ಕೊಂಡಿರಲಿಲ್ಲ. ಆದರೆ ಅದೇ ಸಮಾಜಕ್ಕೆ ಬಂದ ಕರ್ವಾಲೋರವರಿಗೆ ಅದು ಸಾಧ್ಯವಾಗಿದೆ. ಏಕೆಂದರೆ ಕರ್ವಾಲೋ ಬಂದ ಪರಿಸರ ಅಥವಾ ಸಮಾಜವನ್ನು ಮಾನವೀಯ ದೃಷ್ಟಿಕೋನದಿಂದ ಹಾಗೂ ಪ್ರಾಮಾಣಿಕನಾಗಿ ಮಾಡುವ ಸಹಾಯಕ ಪರಿಸರವನ್ನು ಅವರು ನಿರ್ಮಿಸಿಕೊಂಡಿದ್ದರು. ಆದ್ದರಿಂದಲೇ ಪರಿಸರ, ಪ್ರಕೃತಿಯನ್ನು ಸೂಕ್ಷ್ಮವಾಗಿ ಗ್ರಹಿಸುವ ಸಾಮರ್ಥ್ಯ ಮಂದಣ್ಣನಿಗೆ ಇರುವುದನ್ನು ಕರ್ವಾಲೊ ಗಮನಿಸಿದ್ದಾರೆ. ಅದಕ್ಕಾಗಿ ಅರಣ್ಯದ ಪರಿಚಯವಿರುವ ಮಂದಣ್ಣನ ಸಹಾಯ ಪಡೆದು ಹಾರುವ ಓತಿಯ ಬಗ್ಗೆ ನೀಡಿದ ವಿವರಣೆಯಿಂದ ಚಿತ್ರ ಬರೆದುಕೊಂಡು ಅದನ್ನು ನಿರೂಪಕನ ಬಳಿ ವಿವರಿಸುತ್ತ "ಇಲ್ಲ, ಇಲ್ಲ ಈ ವಿಚಾರದಲ್ಲಿ ಮಂದಣ್ಣನ್ನ ಮೀರಿಸುವವರು ಯಾರೂ ಇಲ್ಲ. ಅಷ್ಟೋಂದು ಸೂಕ್ಷ್ಮವಾಗಿ ಗ್ರಹಿಸ್ತಾನೆ.

ಅದ್ಭುತ ಪ್ರಕೃತಿಶಾಸ್ತ್ರದ ಅವನು ಹೀಗೆ ಮಂದಣ್ಣನನ್ನು ಕರ್ವಾಲೊರವರಿಂದ ಪರಿಚಯಿಸಿಕೊಂಡ ನಿರೂಪಕನ ದೃಷ್ಟಿ ಇಲ್ಲಿಯವರೆಗೂ ಮಂದಣ್ಣನನ್ನು ನೋಡಿದ. ಗ್ರಹಿಸಿದಕ್ಕಿಂತ ಭಿನ್ನವಾಗಿ ಗ್ರಹಿಸುವುದಕ್ಕೆ ಬೇಕಾದ ಪರಸರವನ್ನು ನಿರ್ಮಿಸಿ ಕೊಟ್ಟವರು ಕರ್ವಾಲೊ.

"ಮಂದಣ್ಣನ ಬಾಯಿಂದ ಈ ವಿಷಯ ಕೇಳುತ್ತಿದ್ದಂತೆಯೆ ನನಗೆ ರಕ್ತವೆಲ್ಲಾ ಬಣ್ಣಾಗಾಗತೊಡಗಿತು ಇಡಿಯ ಜಗತ್ತೇ ಬೆಟ್ಟ ಬೀಳುವಂಥಾ ಸಮಾಚಾರ ಹೇಳುತ್ತಿದ್ದೇನೆ ಎನ್ನುವುದು ಅರಿವೇ ಅವನಿಗೆ ಇರಲಿಲ್ಲ. ನಾನು ಅದಕ್ಕೆ ಅವನೂರಿಗೆ ಒಮ್ಮೆ ಹೋಗಿ ಕಣ್ಣಾರೆ ಕಂಡು ಬಿಡೋಣ ಅನಂತರ ಹೊರ ಪ್ರಪಂಚಕ್ಕೆ ಈ ಸಂಗತಿ ತಿಳಿಸೋಣ ಅಂತ ಹೋಗಿದ್ದೆ."[11]

ಹೀಗೆ ನಿರೂಪಕನಿಗೆ ತಾನು ನೋಡುವ ಜಗತ್ತಿಗಿಂತ ಬೇರೆಯಾದ ಜಗತ್ತನ್ನು ನೋಡಬೇಕಾದ ಅನಿವಾರ್ಯತೆ ಒದಗಿ ಬರುತ್ತದೆ. ಅಂದರೆ ಕಾದಂಬರಿಯ ಮೊದಲಲ್ಲಿ ಕಂಡು ಬರುವ ನಿರೂಪಕನ ದೃಷ್ಟಿಕೋನ, ನಿಧಾನವಾಗಿ ಕರ್ವಾಲೊರವರು ತೋರಿಸಿದ 'ಕಣ್ತೆರೆದು' ನೋಡುವ ಕ್ರಮದಿಂದ ಭಿನ್ನವಾಗಿ ಪರಿಸರವನ್ನು ನೋಡಿದಾಗ ನಿರೂಪಕನಿಗೆ ಈ ಜಗತ್ತು ವಿಸ್ಮಯಗಳ ಆಗರವೆಂದೆನಿಸಿದೆ. ಹೀಗಾಗಿ ಬೇರೆಯವರಿಂದ ಜಗತ್ತನ್ನು ನೋಡುವ ಕ್ರಮವನ್ನು ಅರಿತ ನಿರೂಪಕ ತನ್ನ ಬದುಕನ್ನು ಹಾಗೂ ಬೇರೆಯವರ ಬದುಕನ್ನು ನೋಡುವ ಕ್ರಮವು ಬದಲಾಗುವುದನ್ನು ಕಾಣಬಹುದಾಗಿದೆ. ಷರಾಬು ಕಂಟ್ರಾಕ್ಟರ್ ಗೋವಿಂದಪ್ಪನವರು ನಿರೂಪಕರನ್ನು ಮಂದಣ್ಣನ ಕೇಸಿಗೆ ಸಂಬಂಧಿಸಿದಂತೆ ಬಂದು ಬೇಟಿಯಾಗಿ ಮಾತನಾಡುತ್ತ "ಈ ಕರ್ವಾಲೊ ಇದಾನಲ್ಲ ಭಾರೀ ಕಿತಾಪತಿ ಮನುಷ್ಯ ಈತ ಏನ್ಮಾಡಿದ ಗೊತ್ತೇ, ಮಲ್ಲಾಪುರದ ಕಡೆಯೋರಿಗೆ ಬಗನಿ ಹೆಂಡ ಕಟ್ಟೋದಕ್ಕೆ ನಾನು ಬೆರಕೆ ಸೇಂದಿ ಮಾರ್ತಿದ್ದೀನೀಂತ ಅರ್ಜಿ ಬರಸೋದೆ! ತಿಂಗಳಿಗೆ ಎಪ್ಪತ್ತು ಸಾವಿರ ಸರಕಾರಕ್ಕೆ ಕಟ್ಕೋಂಡು ನಾನು ಅಸಲು ಗಿಟ್ಟಿಸ ಬೇಕಾದರೆ ಕಷ್ಟಾಗಿದೆ. ನಾನು ಈತನಿಗೆ ಬಿಟ್ಟಬ್ರಾಂದಿ ಕೊಟ್ಟು ಪ್ರಸಲಾಯಿಸ್ಲಿಲ್ಲಾಂತ ಇಂತಾ ಕೆಲಸಕ್ಕಿಳಿಯೋದೇ." ಈ ವಿಚಾರವನ್ನು ತಿಳಿದ ನಿರೂಪಕ "ನಾನು ಕಂಡಂಗೆ ಅವರು ಯಾರ ಜೊತೇನೂ ಹೆಚ್ಗೆ ಸೇರೋಲ್ವಲ್ಲ." ಈ ಮಾತನ್ನು ಕೇಳಿದ ಕಂಟ್ರಾಕ್ಟರ್ ಗೋವಿಂದಪ್ಪ "ಅದೇ ಇರೋದು ಅವಂದು. ನಾವೆಲ್ಲ ಆತನ್ನ ಎಷ್ಟೊಂದು ದೊಡ್ಡ ಮನುಷ್ಯ ಅಂತ ಮರ್ಯಾದೆ ಕೊಡ್ತಿದ್ವಿ. ಈತ ನೋಡಿದರೆ ಬೀದಿ ಪೋಲಿಗಳು, ಬಿಕನಾಸಿಗಳು, ಇಂತೋನ್ ಜೊತೇನೇ ಹೆಗಲ ಮೇಲೆ ಕೈ ಹಾಕ್ಕೊಂಡು ಒಡಾಡ್ತಾನೆ. ಕಳ್ಳಭಟ್ಟಿ ಕಾಸೋನೊಬ್ಬ ಮಂದಣ್ಣಾಂತ ಅವನ ಜೊತೆ ಮಿಲಾಕತ್ ಆಗಿದಾನೆ ಅಂದರೆ ನನಗೆ ಆಶ್ಚರ್ಯ ಆಗತ್ತೆ. ಅವನ ಮೇಲಿನ ಕಳ್ಳಭಟ್ಟಿ ಕೇಸಿಗೆ ನಿಮ್ಮನ್ನೂ ಹ್ಯಾಗೋ ಸೇರಿಸಿದಾರೆ! ನಿಮಗೆ ತಿಳಿದಿರಬಹುದು"[17]

ಇಲ್ಲಿ ಕರ್ವಾಲೊರವರ ಬಗ್ಗೆ ಸಂಪೂರ್ಣವಾಗಿ ತಿಳಿಯದ ಹಾಗೂ ಅವರ ವ್ಯಕ್ತಿತ್ವವನ್ನು ಹತ್ತಿರದಿಂದ ನೋಡಿರದ ವ್ಯಕ್ತಿ ಗೋವಿಂದಪ್ಪನವರು ಯಾವುದೋ ವಿಚಾರದಲ್ಲಿ ಅವರ ಮೇಲೆ ಕೋಪಕ್ಕೆ ಒಳಗಾಗಿ ಅವರನ್ನು ನಕಾರಾತ್ಮಕವಾಗಿ ಅರ್ಥೈಸಿಕೊಳ್ಳುತ್ತಾರೆ. ಅದೇ ದೃಷ್ಟಿಯಿಂದ ಅವರ ಮೇಲೆ ನಂಬಿಕೆಯನ್ನು ಇಟ್ಟುಕೊಂಡ ನಿರೂಪಕರ ದೃಷ್ಟಿಕೋನವನ್ನು ಬದಲಾಯಿಸಲು ಬಂದು ಇಲ್ಲ ಸಲ್ಲದ ಆರೋಪಗಳನ್ನು ಮಾಡುತ್ತಾರೆ. ಅವರ ವ್ಯಕ್ತಿತ್ವವನ್ನು ಆ ಸಮಾಜದಲ್ಲಿ ಕೆಳಮಟ್ಟಿಗೆ ಇಳಿಸಲು ಹೋರಾಟ ಮಾಡುತ್ತಾನೆ. ಇಲ್ಲಿ ಮುಖ್ಯವಾಗಿ ಗಮನಿಸಲೇಬೇಕಾದ ಅಂಶವೆಂದರೆ ಗೋವಿಂದಪ್ಪ ಕರ್ವಾಲೊರ ಮೇಲೆ ಕೋಪಕ್ಕೆ ಒಳಗಾಗಿ ಅದರ ಮೂಲಕ ಕರ್ವಾಲೊರವರನ್ನು ನೋಡಿದಾಗ ಸಂಪೂರ್ಣವಾಗಿ ಅವರ ಬಗ್ಗೆ ನಕಾರವಾಗಿ ಮಾತನಾಡುವ ವ್ಯಕ್ತಿತ್ವ ಕೃತಿಯಲ್ಲಿ ತೆರೆದು ಕೊಂಡಿದೆ. ಅಷ್ಟೇ ಅಲ್ಲದೆ ತಾನು ಗ್ರಹಿಸಿದ ವಿಚಾರವೇ ಸರಿಯದದ್ದು ಎಂದು ಹಾಗೂ ಕರ್ವಾಲೊರವರನ್ನು ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ನಿರೂಪಕನಿಗೆ ಅಪನಂಬಿಕೆ ಬರುವ ಹಾಗೆ ಮಾತನಾಡುತ್ತಾನೆ. ಇದರ ಬಗ್ಗೆ ಆಲೋಚಿಸಿದ ನಿರೂಪಕ "ಕರ್ವಾಲೊ ಇಂಥ ತಳ್ಳಿ ಅರ್ಜಿ ರಾಜಕಾರಣ ಮಾಡಲು ಸಾಧ್ಯವೇ ಇರಲಿಲ್ಲ. ಆದರೆ ಕರ್ವಾಲೊ ಪರಿಚಯವೇ ಇಲ್ಲಿದೆ. ಕರ್ವಾಲೊರಿಗೆ ಆಪ್ತರಾಗಿ ಅವರ ಕೀರ್ತಿಲತೆ ಹಬ್ಬಿಸಿದವರನ್ನು ನೋಡಿದ್ದೆ. ಈಗ ಕರ್ವಾಲೊರನ್ನು ಏನು ತಿಳಿಯದೆ ಅವರ ಮೇಲೆ ನಿಷ್ಕರಣವಾಗಿ ಶಂಕಿಸುವವರನ್ನೂ ನೋಡಿದೆ. ಆದರೆ ಈ ರೀತಿ ಒಬ್ಬರನ್ನು ಅಗೋಚರವಾಗಿ ಮೇಲಕ್ಕೆತ್ತುವ ಅಥವಾ ತುಳಿಯುವ ಗುಪ್ತ ವ್ಯವಸ್ಥೆಯ ವಿರುದ್ಧ ನಾನು ಅಸಹಾಯಕನಾಗಿದ್ದೆ , ಆದರೆ ಗೋವಿಂದಪ್ಪ ನಿರೂಪಕನನ್ನು ತಪ್ಪು ದಾರಿ ಹಿಡಿಯಲು ಬೇಕಾದ ಮಾರ್ಗವನ್ನು ಚೆನ್ನಾಗಿಯೆ ಮಾಡಿದ ಹೇಗೆಂದರೆ "ಗೋವಿಂದಪ್ಪನ ಮಾತು ನಿರೂಪಕ ನಂಬದಿದ್ದರೂ ಪರ್ವಾ ಇಲ್ಲ, ಒಂದು ಬಗೆಯ ಗುಮಾನಿ ಹುಟ್ಟಿಸಿ ಬಿಡೋಣ ಎಂದು ಆತ ಬಂದಿದ್ದು." ಎಂಬ ಅಭಿಪ್ರಾಯವನ್ನು ನಿರೂಪಕ ನೀಡುತ್ತಾನೆ. ಮುಂದೆ ಈ ವಿಚಾರವಾಗಿ ಅಂದರೆ ಕರ್ವಾಲೊರವರ ಮೂಲಕ ಜಗತ್ತನ್ನು ಅರಿಯುವ ಕ್ರಮವನ್ನು ತಿಳಿದ ನಿರೂಪಕ ಬದುಕನ್ನು ನೋಡುವ ಕ್ರಮದಲ್ಲಿ ಆದ ಬದಲಾವಣೆಗಳನ್ನು ಇಲ್ಲಿಯೇ ಗುರ್ತಿಸಬಹುದಾಗಿದೆ ಹೇಗೆಂದರೆ ಗೋವಿಂದಪ್ಪ. ಕರ್ವಾಲೊರವರ ಬಗೆಗೆ ಗುಮಾನಿ ಹುಟ್ಟಲು ಮಾಡಿದ ತಂತ್ರಕ್ಕೆ ಭಿನ್ನವಾಗಿಯೇ ನಿರೂಪಕ ನಿಲ್ಲುತ್ತಾನೆ. ಅಂದರೆ ಗೋವಿಂದಪ್ಪನ ಕುತಂತ್ರಕ್ಕೆ ಬಲಿಯಾಗದೆ ಕರ್ವಾಲೊರವರ ಬಗ್ಗೆ ಚಿಂತಿಸುತ್ತಾನೆ. ಅಷ್ಟೇ ಅಲ್ಲದೆ ಕರ್ವಾಲೊರವರ ಬಗೆಗೆ ಯಾವುದೇ ನಿರ್ಧಾರಕ್ಕೆ ಬರದ ನಿರೂಪಕ ಅವರನ್ನು ಒಂದು ಸಾರಿ ಈ ವಿಷಯವಾಗಿ ಕೇಳಬೇಕೆಂದುಕೊಳ್ಳುತ್ತಾನೆ. ಕೃತಿಯ ಮೊದಲಲ್ಲಿ ನೋಡಿದ್ದನು ನೋಡಿದ ಹಾಗೆಯೇ ಒಪ್ಪಿಕೊಳ್ಳದೆ ಅನುಮಾನವೆಂಬುದನ್ನು ತುಂಬಿಕೊಂಡು ಅಲ್ಲಿನ ಸಮಾಜವನ್ನು ನೋಡುತ್ತಿದ್ದರೂ ಬದಲಾದ ಸಂದರ್ಭಕ್ಕೆ ಬದಲಾದ ವ್ಯಕ್ತಿತ್ವದ ಮೇಲೆ ಯಾರಾದರು

ಯಾವುದರ ಬಗ್ಗೆ ಏನೇ ಹೇಳಿದರೆ ಅದನ್ನು ಹಾಗೆ ಒಪ್ಪಿಕೊಳ್ಳದೆ ಚಿಂತನೆಗಳ ಮೂಲಕ ಸಂದರ್ಭವನ್ನು ಅರ್ಥಮಾಡಿಕೊಳ್ಳಲು ಮುಂದಾಗುತ್ತಿದ್ದಾರೆ.

"ಆತ ಬಂದಾಗ ಕಾಲ ಮೀರಿಹೋಗಿತ್ತು ಅನೇಕ ದಿನಗಳ ಹಿಂದೇನಾದರೂ ಬಂದು ಈ ರೀತಿ ಕರ್ವಾಲೊ ಮೇಲೆ ಹೇಳಿದ್ದರೆ ನನಗೆ ಆ ಧೈರ್ಯ ಉಂಟಾಗಬಹುದಿತ್ತೋ ಏನೋ. ಆದರೆ ಈಗ ಕರ್ವಾಲೊ ಮನಸ್ಸಿನ ಭೂಮಿಕೆ ನನಗೆ ಪರಿಚಯವಾಗಿ ಅವರ ಅಭಿವ್ಯಕ್ತಿ ಪರಿಭಾಷೆಯೂ ನನಗೆ ಪರಿಚಯವಾಗಿತ್ತು."[18]

ಗೋವಿಂದಪ್ಪ ಎಚ್ಚರಿಕೆ ಹೇಳಿ ಹಿಂದಿರುಗಿದಾಗ ನಾನೆಂದುಕೊಂಡೆ ಈ ವಿಷಯ ಮೊದಲು ಕರ್ವಾಲೊರನ್ನು ಕೇಳಿ ಸ್ಪಷ್ಟಪಡಿಸಿಕೊಳ್ಳಬೇಕು ಎಂದು ಇದರೊಡನೇ ನನಗೆ ಗೊತ್ತಾಯ್ತು, ಮಂದಣ್ಣನ ಕೇಸಿನ ಹಿಂದೆ ವಿರುದ್ಧವಾಗಿ ಬೇರೆ ಬೇರೆ ಶಕ್ತಿಗಳೂ ಕೆಲಸ ಮಾಡುತ್ತವೆ ಎಂದು. ನಿರೂಪಕ ಈ ವಿಚಾರವಾಗಿ ಕರ್ವಾಲೊರವರನು ಭೇಟಿಯಾಗಿ ಮಾತನಾಡಿಸಿದಾಗ ಗೋವಿಂದಪ್ಪ ಹೇಳಿದಕ್ಕಿಂತ ಭಿನ್ನವಾಗಿ ಅಲ್ಲಿನ ಸಂದರ್ಭವನ್ನು ವಿವರಿಸುತ್ತಾರೆ. ಆದರೆ "ಈ ಕೇಸನ್ನು ತಮ್ಮ ಪ್ರತಿಷ್ಠೆ ಪ್ರಶ್ನೆ ಮಾಡಿಕೊಂಡಂತೆ ಕಾಣಿಸುತ್ತಿತ್ತು" ಕೇಸು ಮಂದಣ್ಣನ ಕಡೆಗೆ ಆಗುತ್ತಿದೆ ಎಂದು ತಿಳಿದ ಪ್ರಾಸಿಕ್ಯೂಟರು ಕೋಪದಿಂದ ಪೋಲೀಸರ ಕಡೆಗೆ ಗೊನ್ ಸಾಲ್ ವೆಸ್ ಕಡೆಗೆ ನೋಡುತ್ತಾ ಕೋರ್ಟ್ ರೂಂ ಬಿಟ್ಟು ಹೊರಟೇ ಹೋದರು. ನ್ಯಾಯಾಧೀಶರು. ಸೌಮ್ಯದನಿಯಲ್ಲಿ "ಇದೇಕೆ ಈ ಒಂದು ಸಣ್ಣ ಕೇಸಿಗೆ ಇಷ್ಟೊಂದು ಉದ್ವೇಗಗೊಂಡಿದ್ದೀರಿ!" ಎಂದು ಆಶ್ಚರ್ಯ ಸೂಚಿಸಿದರು. ಮತ್ತೊಂದು ಸಂದರ್ಭದಲ್ಲಿ "ನೋಡಿದರೋ ನಿಮ್ಮ ಕೇಸು ನಿಲ್ಲಲಿಲ್ಲವಲ್ಲಾ" ಎಂದು ಹೇಳಿದಕ್ಕೆ ಹೇಳಿದನಂತೆ. ನಾವು ಈ ಕೇಸು ಹಾಕಿದ್ದು ಈ ಕಿಲಾಡಿ ನನ್ಮಗನ ಹಿಂದೆ ಯಾರ್ಯಾರಿದಾರೆ ಪತ್ರ ಮಾಡೋದಕ್ಕೆ ಅಷ್ಟೆ. ಇನ್ನೊಂದು ಸಾರಿ ಅಷ್ಟು ಜನರನ್ನು ಎಳೀತೀವಿ ನೋಡಿ ಅಂತ ಹೀಗೆ ಸಂದರ್ಭಗಳೇ ಪ್ರತಿಷ್ಠೆಯಾದರೆ ಅದಕ್ಕಾಗಿ ಏನು ಬೇಕಾದರೂ ಮಾಡುತ್ತಾರೆ. ವಂಚನೆ ಸಣ್ಣತನ ಎಂಬುದು ಆಯಾ ವರ್ಗದ ಜನರಲ್ಲಿ ಇರುವುದು ಬೆಳಕಿಗೆ ಬರುತ್ತದೆ. ಕರ್ವಾಲೊ ವ್ಯಕ್ತಿತ್ವವೆಂಥದ್ದು ಎಂದರೆ ಪರಿಸ್ಥಿತಿಯನ್ನು ಎಷ್ಟು ಶಾಂತಿಯುತ್ತವಾಗಿ ಮಾನವೀಯತೆಯಿಂದ ಅರ್ಥಮಾಡಿ ಕೊಡು ಪರಿಸ್ಥಿತಿಯನ್ನು ತಿಳಿಗೊಳಿಸುತ್ತಾರೆ ಎಂದರೆ ; ಕರ್ವಾಲೊ "ಅವನ ಮೇಲೆ ಏಕೆ ರೇಗುತ್ತೀರಿ? ಅವನು ಏನೋ ಒಳ್ಳೇ ಉದ್ದೇಶದಿಂದಲೇ ಮಾಡಿದ್ದಾನೆ. ಇಷ್ಟಾದರೂ ಪ್ರಜ್ಞೆ ಇರೋರು ಎಷ್ಟು ಜನ ಇದ್ದಾರೆ ಹೇಳಿ? ನಾವೇ ನಮ್ಮ ಗಾಬರಿಯಲ್ಲಿ ಒಂದಕ್ಕೆರಡು ತಿಳಿದು ಕೊಂಡಿದ್ದೇವಷ್ಟೇ.[19] ಎಂದರು. ಸಂದರ್ಭಗಳು ನೋಡುವ ನಿರೂಪಕನಿಗೆ ಸಂಪೂರ್ಣ ಅರ್ಥವಾಗಿರುವುದಿಲ್ಲ ಆದರೂ ಅದನ್ನು ಅರ್ಥೈಸಿಕೊಳ್ಳಲು ಹೋಗುತ್ತಾನೆ. ಆ ಸಂದರ್ಭದಲ್ಲಿ ಮೂಡಿಬಂದ ಜ್ಞಾನದ ಮೂಲಕವೇ ಎಲ್ಲವೂ

ಅರ್ಥವಾಗಿದೆ ಎಂದು ತಿಳಿದರು ನಾವು ತಿಳಿದ ಅಂಶಕ್ಕಿಂತ ಬೇರೆಯಾದ ವಿಚಾರ ಅಲ್ಲಿರುತ್ತದೆ ಏಕೆಂದರೆ ಸಂದರ್ಭಗಳು ನಿರೂಪಕನಿಗೂ ಅರ್ಥವಾಗದೆ ಇರುವ ಸಂದರ್ಭದಲ್ಲಿ ಅಲ್ಲಿ ಏನೋ ಅನಾಹುತ ನಡೆದಿದೆ ಎಂದು ತಿಳಿದರು. ರೇಗಿದಾಗ ಕರ್ವಾಲೊ ಆ ಸಂದರ್ಭವನ್ನು ತಿಳಿಗೊಳಿಸಿ ಅರ್ಥೈಸುತ್ತಾರೆ ಹಾಗೂ ತಾಳ್ಮೆ ಇಲ್ಲದೇ ಹೋದರೆ ಸಂದರ್ಭಗಳನ್ನು ಅರ್ಥೈಸುವಾಗ ನಮ್ಮ ಮನಸ್ಥಿತಿ ಬೇರೆಯಾಗುತ್ತದೆ ಒಂದಕ್ಕೆ ಎರಡು ಅರ್ಥವನ್ನು ನಾವೇ ಅರ್ಥಮಾಡಿಕೊಳ್ಳುತ್ತೇವೆಂದು ವಿವರಿಸಿದರು. ಹೀಗೆ ಸಾಗುವ ಕೃತಿಯಲ್ಲಿ ನಿರೂಪಕನಿಗೆ ಅರ್ಥವಾಗದ ವಿಸ್ಮಯವನ್ನು ಒಡೆದು ತೋರಿಸುವ ಹಂತಕ್ಕೆ ಕರ್ವಾಲೊ ಬರುತ್ತಾರೆ. ಆದರೆ ಪ್ರಕೃತಿ ಮನುಷ್ಯನಿಗೆ ಎಂದಿಗೂ ಅರ್ಥವಾಗದೆ ಇರುವ ಸಂಪತ್ತು ಅದನ್ನು ಅರ್ಥೈಸಿಕೊಂಡಿದ್ದೇವೆ ಎಂದರೆ ಅದು ನಮ್ಮ ಬರಿಯ ಭ್ರಮೆಯಾಗುತ್ತದೆ. ಎಷ್ಟೋ ವಿಚಾರಗಳಲ್ಲಿ ಪ್ರಕೃತಿ ತನ್ನ ನಿಗೂಢತೆಯನ್ನು ಯಾರಿಗೂ ಅರ್ಥೈಸುವುದಿಲ್ಲ ಅರಿವಿಗೂ ಸಿಗದ ರೀತಿಯಲ್ಲಿ ಸರಪಳಿಯನ್ನು ಬಿಗಿದು ಕೊಂಡು ಒಡುತ್ತದೆ. ಅದನ್ನು ನಾವು ಒಡೆದು ಅರ್ಥೈಸಿಕೊಂಡಿದ್ದೇವೆ ಎಂದರೂ ಅದು ನಮ್ಮ ಭ್ರಮೆಯೇ ಹೊರತು ಅರ್ಥವಾಗದ ಪರಿಸರದ್ದಲ್ಲ.

ಪರಿಸರದ ವಿಸ್ಮಯಗಳಲ್ಲಿ ಪ್ರಾಣಿ, ಪಕ್ಷಿ ಕೀಟಗಳ ಜೀವನ ಕ್ರಿಯೆ ಅದನ್ನು ಅರಗಿಸಿಕೊಂಡ ಪ್ರಕೃತಿ ಇವುಗಳ ಪರಿಚಯವಿರುವ ಕರ್ವಾಲೊರವರಿಂದ ನಿರೂಪಕನಿಗೆ ಅರ್ಥವಾಗುತ್ತದೆ. ಅರಣ್ಯದ ಬದುಕಿನಲ್ಲಿ ಕೀಟಗಳು ತಮ್ಮದೇ ಆದ ಬದುಕನ್ನು ರೂಪಿಸಿಕೊಂಡಿರುತ್ತವೆ ಎನ್ನುವುದು ಮುಖ್ಯ ಏಕೆಂದರೆ ಮನುಷ್ಯನ ಬದುಕಿನಂತೆಯೇ ಅವುಗಳ ಬದುಕು ನಡೆದರು ಅವುಗಳಲ್ಲಿ ಅದರದೇ ಆದ ವಿಶಿಷ್ಟತೆಯ ವ್ಯವಸ್ಥೆ ಎಂಬುವುದನ್ನು ಗಮನಿಸಬಹುದಾಗಿದೆ. ಏಕೆಂದರೆ "ಕರ್ವಾಲೊರವರ ಅನುಭವಪೂರ್ಣ ವಿವರಣೆ ವಿಶ್ಲೇಷಣೆಗಳು ನಿಧಾನವಾಗಿ ಹೊಸ ಜಾಗೃತಿಯನ್ನು ಉಂಟು ಮಾಡಿದುವು. ಕೋಲು ಕೋಲಾದ ಮುಳ್ಳುಗಿಡ ಒಂದನ್ನು ತೋರಿಸಿ 'ನೋಡಿ' ಎಂದರು. ಏನೂ ಕಾಣಲಿಲ್ಲ. ಕರ್ವಾಲೊ ಕಡ್ಡಿಯೊಂದನ್ನು ತೆಗೆದುಕೊಂಡು ಮಂತ್ರ ದಂಡವೆಂಬಂತೆ ಒಂದು ಕೋಟಿಯ ಕಡ್ಡಿಯನ್ನು ಮುಟ್ಟಿದರು, ಕೂಡಲೇ ಆ ಸಣ್ಣರೆಂಬೆ ಎಚ್ಚೆತ್ತುಕೊಂಡು ಕೈಕಾಲು ಮೀಸೆ ಆಡಿಸುತ್ತಾ ಇನ್ನೊಂದು ಕೊಂಬೆಗೆ ನಡೆದು ಹೋಗುವ ಕಡಿ ಹುಳುವಾಗಿತು."[20] ಹೀಗೆ ನಮ್ಮ ಸಾಮಾಜಿಕ ಬದುಕು ಎಂಬುದರಿಂದ ಹೊರಗೆ ಹೋಗಿ ನಿಂತಾಗ ಕೆಲವೊಂದು ವಿಸ್ಮಯದ ಕೀಟ ಜಗತ್ತು ನಮಗೆ ಪರಿಚಯಕ್ಕೆ ಬರುತ್ತದೆ. ಆದರ ಮೂಲಕ ಸಿಗುವ ಜ್ಞಾನ ಪರಿಸರವನ್ನು ಅವಲಂಬಿಸಿಕೊಂಡು ಪ್ರಾಣಿ, ಪಕ್ಷಿ ಕೀಟಗಳು ಬದುಕನ್ನು ನಡೆಸುತ್ತವೆ ಆದರೆ ಬುದ್ಧಿವಂತನಾದ ಮನುಷ್ಯ ಆ ಪರಿಸರದ ಮೇಲೆ ತನ್ನ ಹಿಡಿತವನ್ನು ಸಾಧಿಸುತ್ತಾನೆ. ಆದರೂ ಅದು ಸತ್ಯದಿಂದ ಹೊರಗೆ ನಿಲ್ಲುತ್ತದೆ. ಎಂಬುದನ್ನು ತಿಳಿಯುವುದರಲ್ಲಿ ಅವನು ಬೇರೆಯಾವುದಕ್ಕೋ

ತೆರೆದುಕೊಂಡಿರುತ್ತಾನೆ. ಹೀಗೆ ಭ್ರಮೆಗಳಲ್ಲಿ ಬದುಕುವ ಮನುಷ್ಯ ಹಲವು ಸಂಘರ್ಷಗಳಿಗೆ ಒಳಗಾಗುತ್ತಾನೆ.

ನಿರೂಪಕ ಅರಣ್ಯದ ನಡುವಿನಲ್ಲಿ ಒಂದು ಕೊಳವನ್ನು ನೋಡುತ್ತಾರೆ. ಹೊಂಬಿಸಿಲಿನ ಕಿರಣಗಳು ಕೊಳದ ಮೇಲಕ್ಕೆ ಓರೆಯಾಗಿ ಬೀಳುತ್ತಿದ್ದುವು. ಇದ್ದಕ್ಕಿದದ್ದಂತೆ ಕೊಳದ ನಡುವಿನ ಶೂನ್ಯ ಅಂತರಾಳದಲ್ಲಿ ಯಾರೋ ಬೆಂಕಿ ಕಡ್ಡಿಯನ್ನು ಗೀಚಿದಂತೆ ಮಿರುಗುವ ಬೆಂಕಿಯ ಉಂಡೆಯಾಗಿ ಮಿಂಚುಳ್ಳಿಯೊಂದು ಹಠಾತ್ತಾಗಿ ಪ್ರತ್ಯಕ್ಷವಾಯ್ತು. ಕೊಳದ ಹಿನ್ನಲೆಯಲ್ಲಿ ನೆರಳಿನಿಂದ ಅದು ಹಠಾತ್ತಾಗಿ ಬಿಸಿಲಿಗೆ ಬಂದುದರಿಂದ ಅದು ಶೂನ್ಯದಲ್ಲಿ ನಮಗೆ ಪ್ರತ್ಯಕ್ಷವಾದಷ್ಟು ಅನಿರೀಕ್ಷತವಾಗಿ ದೃಗ್ಗೋಚರವಾಗಿತ್ತು. ಭರ್ರನೆ ರೆಕ್ಕೆ ಬಡಿಯುತ್ತ ಹೆಲಿಕ್ಯಾಪ್ಟರಿಂದ ಶೂನ್ಯದಲ್ಲಿ ನಿಂತು ಕೊಳದಲ್ಲಿ ಅದೃಶ್ಯವಾಗಿ ಆಡುತ್ತಿದ್ದ ಮೀನೊಂದಕ್ಕೆ ಗುರಿ ಬಿತ್ತಿತ್ತು ಮುಂದೆ ಮಿಂಚುಳ್ಳಿ ಡುಬಕ್ ಎಂದುಕೊಳ್ಳುವ ನೀರೊಳಕ್ಕೆ ಧುಮುಕಿ ಬೆಳ್ಳಿಯ ತುಣುಕಿನಂತೆ ಮಿನುಗುತ್ತಿದ್ದ ಚಿಕ್ಕ ಮೀನೊಂದನ್ನು ಕೊಕ್ಕಿನಲ್ಲಿ ಹಿಡಿದುಕೊಂಡು ಮೇಲಕ್ಕೆದ್ದು ಅಂತರ್ಧಾನವಾಯಿತು.
ಹಕ್ಕಿಗಳ ಜಾತಿಗೆ ಸೇರಿದ ಮುಂಗಟ್ಟಿ ಹಕ್ಕಿಯ ಬದುಕಿನ ಕ್ರಮವೊಂದು ವಿಶಿಷ್ಟವಾಗಿರುವುದನ್ನು ಕರ್ವಾಲೊ ವಿವರಿಸುತ್ತಾರೆ. “ಈ ಜಾತಿಯ ಹೆಣ್ಣು ಹಕ್ಕಿ ಮರದ ಪೊಟರೆಯೊಳಗೆ ಗೂಡು ಮಾಡಿ ಮೊಟ್ಟೆ ಇಡುತ್ತದೆ. ಕಾವು ಕೊಡಲು ಕುಳಿತನಂತರ ಗಂಡು ಹಕ್ಕಿ ತಂದು ಕೊಡುವ ಆಹಾರವೆ ಹೆಣ್ಣು ಹಕ್ಕಿಗೆ ಆಧಾರ. ಗಂಡು ಹಕ್ಕಿಯನ್ನೇನಾದರೂ ಹೊಡೆದು ಬಿಟ್ಟರೆ ಇನ್ನಾವೂದು ಗೂಡೊಳಗೆ ಹೋಗದಂತೆ ಬಲವಾದ ಒಂದು ತೆರೆಯನ್ನು ಹೊರಗಿನಿಂದ ನೆಯ್ದು ಹೆಣ್ಣು ಹಕ್ಕಿಯ ಕೊಕ್ಕು ಮಾತ್ರ ಹೊರಬರುವಂತೆ ಕಿಂಡಿ ಬಿಟ್ಟಿರುತ್ತದೆ. ಗಂಡು ಹಕ್ಕಿ ತಂದುಕೊಡುವ ಆಹಾರವೆ ಹೆಣ್ಣು ಹಕ್ಕಿಗೆ ಆಧಾರ. ಗಂಡು ಹಕ್ಕಿಯನ್ನೇನಾದರೂ ಹೊಡೆದು ಬಿಟ್ಟರೆ ಹೆಣ್ಣು ಹಕ್ಕಿಗೆ ಆಹಾರವಿಲ್ಲದೆ ಅಲ್ಲೇ ಸೊರಗಿ ಮರಿಗಳೊಡನೆ ಸಾಯುತ್ತದೆ. ಇದೆಲ್ಲಾ ಮನಸ್ಸಿಗೆ ಬಂದು ಒಮ್ಮೆಲೆ ಕೂಗಿದೆ. ಕರಿಯಪ್ಪನ ಗುರಿ ತಪ್ಪಿ ಹಕ್ಕಿ ಪಾರಾಗಿ ಹೋಯ್ತು ಇಷ್ಟೇ ನಡೆದಿದ್ದು ಯಾರು ಬೇಸರ ಮಾಡಿಕೋಬೇಡಿ ಎಂದರು. [21]

ಶಿಕಾರಿ ಮಾಡುವ ಕರಿಯಪ್ಪನಿಗೆ ಇದು ಯಾವುದರ ಪರಿಚಯವಿರುವುದಿಲ್ಲ. ಆದರೆ ಆ ಹಕ್ಕಿ ಇಟ್ಟ ಗುರಿ ಏನಾದರೂ ತಾಗಿ ಹಕ್ಕಿ ಸತ್ತಿದ್ದರೆ ಅದನ್ನು ಬಳಸಿಕೊಂಡು ಅಡಿಗೆ ಮಾಡುತ್ತಿದ್ದ. ಆದರೆ ಅದರ ಜೀವನ ಕ್ರಮವನ್ನು ಅರಿತಾಗ ಆಗಬಹುದಾದ, ಸಂಭವಿಸಬಹುದಾದ ಅನಾಹುತಗಳನ್ನುಶ ತಪ್ಪಿಸಿದವರು ಕರ್ವಾಲೋ ಇಲ್ಲಿ ಇನ್ನು ಮುಖ್ಯವಾಗಿ ಗಮನಿಸಬಹುದಾದ ಅಂಶವೆಂದರೆ ಕರ್ವಾಲೋ ಹಕ್ಕಿಯನ್ನು ಉಳಿಸುವ ಸಂದರ್ಭಕ್ಕೆ ಕೋಪಿಷ್ಠರಾದರೆ ಹೊರೆತು ಸಂಪೂರ್ಣ

ವಿವರಿಸುವವರೆಗೂ ಅವರು ಕೋಪಿಷ್ಠರಾಗಿರಲಿಲ್ಲ, ಕೊನೆಗೆ "ಯಾರು ಬೇಸರ ಮಾಡಿಕೋಬೇಡಿ" ಎಂದಾಗ ಕರ್ವಾಲೋರವರಿಂದ ಕಲಿಯಬೇಕಾದ ಸಂಬಂಧಗಳ ಬೆಸೆಯುವಿಕೆಯಲ್ಲಿ ಮನುಷ್ಯ ಮನುಷ್ಯರ ನಡುವಿನ ಸಂಬಂಧವನ್ನು ಅರ್ಥ ಮಾಡಿಕೊಳ್ಳುವಿಕೆಯಲ್ಲಿ ಅವರಿಗಿರುವ ತಾಳ್ಮೆಯನ್ನು ಹಾಗೂ ಮಾನವೀಯತೆಯನ್ನು ಕಾಣಬಹುದಾಗಿದೆ. ಇಂತಹ ವಿಚಾರಗಳನ್ನು ಹತ್ತಿರದಿಂದ ನೋಡವ ನಿರೂಪಕನಿಗೂ ತನ್ನ ಸಮಾಜದ ಒಳಗೆ ನಡೆಯುವ ಘರ್ಷಣೆಯಿಂದ ತನ್ನ ವ್ಯಕ್ತಿತ್ವವನ್ನು ಬದಲಾಯಿಸಿಕೊಳ್ಳುತ್ತಿರುತ್ತಾನೆ. 3 ರ ಮುಂದೆ 7 ಸೊನ್ನೆ ಹಾಕಿದಾಗ ಸರಾಸರಿ ಹಾರುವ ಓತಿ ವರ್ಷಗಳ ಹಿಂದಿನದನ್ನು ತನ್ನ ಅಂತರಂಗದಲ್ಲಿಯೇ ಹಿಡಿದು ಬೆಳೆದ ಹಾರುವ ಓತಿ ಇಂದಿನ ವರ್ತಮಾನಕ್ಕೆ ಕಾಣಸಿಗುವ ಒಂದು ಪ್ರಾಣಿ ಇಲ್ಲಿ ವರ್ತಮಾನದ ಅನುಭವದ ಮೂಲಕ ಹಿಂದಿನ ತನ್ನ ಗ್ರಹಿಕೆಯ ಮಿತಿ ಗುರ್ತಿಸಿಕೊಳ್ಳುತ್ತಿದೆ. ಹೀಗಾಗಿ ಪ್ರಜ್ಞೆಯು ಬಳಕೆಯಾಗುವ ಕ್ರಮವು ವಸ್ತುವಿನ ಗ್ರಹಿಕೆಯ ಕ್ರಮಕ್ಕೆ ತಕ್ಕಂತೆ ಬದಲಾಯಿತು.

ಜಿ.ಎಚ್. ನಾಯಕರು 'ಕರ್ವಾಲೋ' ಕಾದಂಬರಿಯ ಅರ್ಥವಂತಿಕೆಯನ್ನು ಭಿನ್ನ ರೀತಿಯಲ್ಲಿ ಗುರ್ತಿಸುತ್ತಾರೆ.

- "ನಿರೂಪಕನ ಅನಿಸಿಕೆ ಪ್ರತಿಕ್ರಿಯೆ, ವ್ಯಾಖ್ಯಾನಗಳ ಹೊರಗೆ ಕಾದಂಬರಿಯ ಅರ್ಥವಂತಿಕೆ ಭಿನ್ನ ಆಯಾಮಗಳನ್ನು ಪಡೆದುಕೊಳ್ಳಬಹುದಾದಂತೆ ಕಾದಂಬರಿಯ ವಿವರಗಳಿವೆ.
- ಬೇರೆಯವರ ಆಸಕ್ತಿಗಳನ್ನು ಉಪೇಕ್ಷೆಗಳಿಂದ ಕಾಣುವ ನಿರೂಪಕನಿಗೆ ತನ್ನ ಆಸಕ್ತಿಯೂ ಬೇರೆಯವರ ದೃಷ್ಟಿಯಲ್ಲಿ ಬೇಜಾವಾಬ್ದಾರಿತನದ್ದಾಗಿ ಕಾಣಬಹುದೆಂಬುದು ನಿರೂಪಕನ ಪ್ರಜ್ಞೆಗೆ ಹೊಳೆಯುವುದಿಲ್ಲ.
- ಹಾರುವ ಓತಿಯ ಅನ್ವೇಷಣೆಗೆ ಸಂಬಂಧಪಟ್ಟಂತಯೇ ಪರಚಿತರಾಗಿರುವ ಮನುಷ್ಯರ ಬಗ್ಗೆ ಅವರ ಪೂರ್ವಾಪರಗಳ ಬಗ್ಗೆ ತಿಳಿಯಬೇಕೆಂಬ ಆಸಕ್ತಿ ಕರ್ವಾಲೋನಲ್ಲಿ ಅಷ್ಟಾಗಿ ಪ್ರಕಟವಾಗದಿರುವುದರಲ್ಲಿ ಇರುವ ವ್ಯಂಗ್ಯ ಹೊಳೆಯುವುದೇ ಇಲ್ಲ.

ಇಲ್ಲಿ ನಿರೂಪಕನ ಪ್ರಜ್ಞೆಯಾಚೆಗೂ ಅನೇಕ ಆಯಾಮಗಳು ಇವೆ ಎಂಬ ಅಂಶ ಮುಖ್ಯವಾದದು.

ಕರ್ವಾಲೊ ಕಾದಂಬರಿಯನ್ನು ಅರ್ಥೈಸಿಕೊಳ್ಳುವುದಕ್ಕೆ 'ವಿಮರ್ಶೆಯ ವಿಮರ್ಶೆ' ಕೃತಿಯಲ್ಲಿ ಪ್ರಕಟವಾದ 'ನನ್ನ ಬರವಣಿಗೆಗೆ ಹಣೆಪಟ್ಟಿ ಅನವಶ್ಯಕ' ಎಂಬ ಲೇಖನದಲ್ಲಿ ಪ್ರಶ್ನೋತ್ತರ ಮಾದರಿಯಲ್ಲಿ ಕೇಳಲಾದ ಪ್ರಶ್ನೆಗಳಿಗೆ ತೇಜಸ್ವಿ ಉತ್ತರಿಸಿದ್ದನ್ನು ಕೃತಿ ಅರ್ಥೈಸುವಿಕೆಗೆ ಬಳಸಿಕೊಳ್ಳಲಾಗಿದೆ.

ಪ್ರಶ್ನೆ : ಕಾರಂತರ ಜೀವನ 'ಕುವೆಂಪು ಕಲಾಸೃಷ್ಟಿ' ಲೋಹಿಯಾ ರ ತತ್ವ ಚಿಂತನೆ ಈ ಮೂರೂ ನಿಮ್ಮ ಬರವಣಿಗೆಗೆ ಸಹಾಯಕವಾಗುವ ದಿಕ್ಸೂಚಿಗಳೆಂದು ಅಂದಿದ್ದೀರಿ ಇವತ್ತಿಗೂ ಈ ಅಂಶಗಳನ್ನು ಸಮರ್ಥಿಸುತ್ತೀರ?

ಕಾರಂತರ ಜೀವನದ ಪ್ರಯೋಗಶೀಲತೆ, ಕುವೆಂಪುರವರ ಕಲಾಸೃಷ್ಟಿ, ಲೋಹಿಯಾ ತತ್ವಚಿಂತನೆ ಇವು ಮೂರು ನನ್ನ ಮುಂದಿನ ಬರವಣಿಗೆಯ ದಿಕ್ಸೂಚಿಗಳೆಂದು ಅವತ್ತು ನಾನು ಹೇಳಿದ್ದು ಈ ಮೂರು ಅಂಶಗಳ ಪ್ರಭಾವವನ್ನು ನನ್ನ ಬರವಣಿಗೆಯಲ್ಲೂ ಬದುಕಿನಲ್ಲೂ ಇವತ್ತಿಗೂ ನೀವು ಕಾಣಬಹುದಲ್ಲವೆ.? ಭಾರತದ ತತ್ವಶಾಸ್ತ್ರ ಪರಂಪರೆ ಆಯಾ ಜಾತಿ ಮತ್ತು ಮತಗಳ ದೆಸೆಯಿಂದ ಬಹು ಹಿಂದೆಯೇ ಕೊನೆಯುಸಿರೆಳೆಯಿತು. ರಾಧಾಕೃಷ್ಣನ್, ಹಿರಿಯಣ್ಣಯ್ಯ ಇವರನ್ನೆಲ್ಲಾ ತತ್ವಜ್ಞಾನಿಗಳೆಂದು ಹೊಗಳುತ್ತಾರೆ ಇವರನ್ನೆಲ್ಲಾ ಭಾಷ್ಯಕಾರರೆಂದು ಕರೆಯಬಹುದು ಅಷ್ಟೇ ಹೊರತು ತತ್ವ ಮೀಮಾಂಸಕರೆಂದು ಕರೆಯಲು ಸಾಧ್ಯವಿಲ್ಲ. ಭಾರತದ ಈಚಿನ ವರ್ಷಗಳಲ್ಲಿ ಸೃಷ್ಟಿಸಿದ ಒರಿಜಿನಲ್ ಎನ್ನುವಂಥ ತತ್ವ ಮೀಮಾಂಸಕ ಎಂದರೆ ಲೋಹಿಯಾ ಎಂದೇ ನನ್ನ ಭಾವನೆ ಗಾಂಧೀಜಿಯ ಧ್ಯೇಯ ಧೋರಣೆಗಳನ್ನು ತಾತ್ವಿಕ ದೃಷ್ಟಿಕೋನದಿಂದ ಚರ್ಚಿಸಿ ಅದಕ್ಕೊಂದು ಸೈದ್ಧಾಂತಿಕ ಸ್ವರೂಪ ನೀಡಿದ್ದೇ ಲೋಹಿಯಾ. ನಮ್ಮ ದೇಶದ ಕಳ್ಳ ಗಾಂಧಿವಾದಿಗಳನ್ನೇ ಗಾಂಧಿ ವಕ್ತಾರರೆಂದು ತಿಳಿದಿದ್ದ ನನಗೆ ಲೋಹಿಯ ಓದುವವರೆಗೂ ಗಾಂಧಿ ಬಗ್ಗೆ ಅಪಾರ ತಿರಸ್ಕಾರವೇ ಇತ್ತು. ಹಾಗಾಗಿ ಗಾಂಧಿ ಬಗ್ಗೆ ಇವತ್ತು ಮಾಯಾವತಿಯಾಗಲಿ ಕಾನ್ಸಿರಾಮ್ ಆಗಲೀ ತಿರಸ್ಕಾರದ ಮಾತಾನಾಡಿದರೆ ಅದು ಸಹಜವೇ ಅನ್ನಿಸುತ್ತದೆ.[22] ಹಾಗಾದರೆ ಗಾಂಧಿಯವರನ್ನು ಅರ್ಥೈಸಿಕೊಳ್ಳಲು ತೇಜಸ್ವಿಯವರಿಗೆ ಲೋಹಿಯ ತತ್ವಚಿಂತನೆ ಅವಶ್ಯಕವಾಗಿ ಬೇಕಾಗಿತ್ತು. ಅಂದರೆ ತೇಜಸ್ವಿ ಯವರಿಗೆ ಗಾಂಧಿಯವರನ್ನು 'ಕಣ್ತೆರೆದು' ನೋಡಲು ಈ ತತ್ವ ಸಿದ್ಧಾಂತ ಬೇಕಾಗಿರುವ ಹಾಗೆ ಕರ್ವಾಲೊ ಕಾದಂಬರಿಯಲ್ಲಿ ಕರ್ವಾಲೊರವರಿಂದ ನಿರೂಪಕ 'ಕಣ್ತೆರೆದು' ಜಗತ್ತನ್ನು,ಸಮಾಜವನ್ನು ನೋಡುವ, ನೋಡಬೇಕಾದ ಅವಶ್ಯಕತೆಗಳು ಇದೆ. ಎಂದಾಯಿತ್ತು. ಲೋಹಿಯಾ ಚಿಂತನೆಗಳು ಗಾಂಧಿಯನ್ನು ಅರ್ಥೈಸಿದಂತೆ, ಕರ್ವಾಲೊರವರಿಂದ ಜಗತ್ತನ್ನು ಅರ್ಥೈಸಿಕೊಳ್ಳಬೇಕಾದ, ಅರ್ಥೈಸಿಕೊಂಡ ನಿರೂಪಕನ ಚಿಂತನೆಯಲ್ಲಿ ಗಾಂಧಿ ಹಾಗೂ ಕರ್ವಾಲೊ ಒಂದಾಗುತ್ತಾರೆ. ಏಕೆಂದರೆ ಗಾಂಧಿಜಿಯವರ ಆದರ್ಶಗಳು ಕರ್ವಾಲೊ ರವರಲ್ಲಿಯೂ ಮೈಗೂಡಿವೆ. ಹಾಗೂ ಅವರಿಂದ ಕಲಿಯಬೇಕಾದ ಮಾನವೀಯತೆ, ತಾಳ್ಮೆಯ ಅಂಶಗಳನ್ನು ಮತ್ತು ಜಗತ್ತನ್ನು ನೋಡಬೇಕಾದ ಮಾದರಿಯನ್ನು 'ಕಣ್ತೆರೆದು' ನೋಡಬೇಕಾದ ಅವಶ್ಯಕತೆಯನ್ನು ಕರ್ವಾಲೊ ಕಾದಂಬರಿ ಮೈಗೂಡಿಕೊಂಡು ಸಂರಚಿಸಿಕೊಂಡಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಅಡಿ ಟಿಪ್ಪಣಿಗಳು

1. ಕೆ. ಪಿ. ಪೂರ್ಣಚಂದ್ರ ತೇಜಸ್ವಿ, 'ಕರ್ವಾಲೊ' ಪುಸ್ತಕ ಪ್ರಕಾಶನ, ಇಪ್ಪತ್ತೊಂಭತ್ತನೆ ಮುದ್ರಣ 2011 ಪು.18
2. – ಅದೇ – ಪು 19
3. – ಅದೇ – ಪು 20
4. ಓ ಎಲ್ ನಾಗಭೂಷಣ ಸ್ವಾಮಿ ; ವಿಮರ್ಶೆಯ ಪರಿಭಾಷೆ, ಪ್ರಥಮ ಆವೃತಿ 1998, ಪು.56
5. – ಅದೇ – ಪು 03
6. – ಅದೇ – ಪು 01
7. – ಅದೇ – ಪು 12
8. – ಅದೇ – ಪು 13,14
9. – ಅದೇ – ಪು 25
10. – ಅದೇ – ಪು 43
11. – ಅದೇ – ಪು 43
12. – ಅದೇ – ಪು 145
13. – ಅದೇ – ಪು 69
14. – ಅದೇ – ಪು 71
15. – ಅದೇ – ಪು 72
16. – ಅದೇ – ಪು 79
17. – ಅದೇ – ಪು 84
18. – ಅದೇ – ಪು 84
19. – ಅದೇ – ಪು 92
20. – ಅದೇ – ಪು 110
21. –ಅದೇ – ಪು 113

22. ಡಾ. ಎಚ್. ಶಶಿಕಲಾರವರು ಸಂರಚನೆಯ (ರಾಚನಿಕತೆ) ಬಗ್ಗೆ ನೀಡಿದ ಉಪನ್ಯಾಸ ದಲ್ಲಿ ಮಾಡಿಕೊಂಡ ಟಿಪ್ಪಣಿಗಳು

23. ಕೆ.ವಿ ನಾರಾಯಣ್ ; ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, 1997

## ಅಧ್ಯಾಯ – 7

## ನಿಗೂಢ ಮನುಷ್ಯರು ಕಾದಂಬರಿಯ ವಸ್ತು ಮತ್ತು ತಂತ್ರ

ಡಾ. ಎಚ್. ಶಶಿಕಲಾರವರು "ಮನುಷ್ಯನ ಅಸ್ತಿತ್ವದ ನೆಲೆಗಳು" ಎಂಬ ಲೇಖನದಲ್ಲಿ ಅಸ್ತಿತ್ವವಾದದ ತಾತ್ವಿಕ ಧೋರಣೆಯನ್ನು ಹೀಗೆ ಗುರ್ತಿಸಿದ್ದಾರೆ. ಆಧುನಿಕ ಯುಗದಲ್ಲಿ ವ್ಯಕ್ತಿನಿಷ್ಠ ನೆಲೆಯ ಬದುಕನ್ನು ಅನುಭವಿಸುವುದು ಅನಿವಾರ್ಯವಾದ ಕ್ರಮವಾಯಿತು. ವ್ಯಕ್ತಿನಿಷ್ಠ ನೆಲೆಯ ಪ್ರಜ್ಞೆಯ ಮೂಲಕ ಬದುಕನ್ನು ನೋಡುವ ಬಗೆಯು ಕೇವಲ ವ್ಯಕ್ತಿ ವಿಶಿಷ್ಠತೆಗಾಗಿ ಹಂಬಲಿಸುವುದು ಮಾತ್ರವೇ ಆಗಿರಲಿಲ್ಲ, ಬದಲಾಗುತ್ತಿದ್ದ ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ವ್ಯಕ್ತಿ ಸಮಾಜಕ್ಕೆ ವಿಮುಖನಾಗಿ ಅಥವಾ ಸುತ್ತಲಿನ ಬದುಕಿನಿಂದ ನಿರಾಶೆಹೊಂದಿ ತನ್ನೊಳಗೆ ಅಂಟಿಕೊಂಡವನಂತೆ ಆಗಿದ್ದು ಕೇವಲ ನಮ್ಮ ಪರಿಸರದ ಕಾರಣವಷ್ಟೇ ಆಗಿಲ್ಲ. ಜಾಗತಿಕ ಸಾಹಿತ್ಯದ ವಲಯದಲ್ಲೂ, ಅದರಲ್ಲೂ ಯುರೋಪಿಯನ್ ಸಾಹಿತ್ಯದ ಮೂಲಕ ಅರಿವಿಗೆ ಬರತೊಡಗಿದ್ದ ಅಸಂಗತವಾದ ಅಸ್ತಿತ್ವವಾದದಂತಹ ತಾತ್ವಿಕತೆಗಳು ಮನುಷ್ಯ ಮತ್ತು ಪರಿಸರದ ಸಂಬಂಧವನ್ನು ಬೇರೆ, ಬೇರೆ ಆಯಾಮಗಳಿಂದ ಅನುಭವದ ಮೂಲಕ ತಿಳುವಳಿಕೆಯ ಭಾಗವಾಗಿಸಿಕೊಳ್ಳತೊಡಗಿದ್ದವು. ಇಂತಹ ತಿಳುವಳಿಕೆಯ ಗಾಢ ಪ್ರಭಾವ, ಪ್ರೇರಣೆಗಳೊಡನೆ ತನ್ನ ಸುತ್ತಲಿನ ಪರಿಸರದಲ್ಲಾಗುತ್ತಿರುವ ಪಲ್ಲಟದ ಅರಿವು ಪ್ರಜ್ಞೆಯಲ್ಲಿ ತಟ್ಟಿ ಮೂಡಿಸಿದ ಎಚ್ಚರವು ವೈಚಾರಿಕತೆಯನ್ನೇ ತನ್ನೊಡಲಿನಲ್ಲಿ ಇಟ್ಟುಕೊಂಡಿದ್ದರೂ ಇದುವರೆಗಿನ ಭಾವವಲಯದಲ್ಲಿ ಸಂಚಲನವನ್ನೂ ತಂದೊಡ್ಡಿತು"1

ಇದೇ ರೀತಿಯ ಅಸ್ತಿತ್ವದ ನೆಲೆಯಲ್ಲಿ ತನ್ನ ಅಸ್ತಿತ್ವವನ್ನು ಹುಡುಕುತ್ತಿರುವ 'ನಿಗೂಢ ಮನುಷ್ಯರು' ಕೃತಿಯ ರಂಗಪ್ಪನ ಬೆನ್ನು ಹತ್ತಿ ಹಳೆಯ ಬಟ್ಟೆ ಟಾಪಿನ ಫೋರ್ಡ್ ಕಾರಿನ ಮಾಲೀಕ ಜಗನ್ನಾಥನ ಜೊತೆಯಲ್ಲಿ ಜಮೀನು ಕೊಳ್ಳಲೆಂದು ನುಗುಬೀಡಿಗೆ ಬರುತ್ತಾನೆ. ಜಗನ್ನಾಥನನ್ನು ಭೇಟಿ ಮಾಡಿದ ರಂಗಪ್ಪ 'ನುಗುಬೀಡಿನ ಕಡೆಗೆ ಬಾರಯ್ಯ' ಎಂದು ಕರೆದಾಗ "ನಡಿ ಹೋಗೋಣ" ಎಂದು ಹೊರಟೇಬಿಟ್ಟ ರಂಗಪ್ಪ ಮೊದಲು ಅಪ್ರತಿಭನಾದ ಇದೇನು ಇವನಿಗೆ ಕೆಲಸ ಕಾರ್ಯ ಏನೂ ಇಲ್ಲವೆ? ಕರೆಯುತ್ತಿದ್ದಂತೆಯೇ ತಯಾರಾದನಲ್ಲ" ಎಂದು ಯೋಚಿಸಿದ. ಆದರೆ ಜಗನ್ನಾಥ ಹಲವು ತಿಂಗಳುಗಳ ಹಿಂದೆಯೇ ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬಂದಿದ್ದ ಇದ್ದ ಕೆಲಸವನ್ನು ಅದರ ಏಕತಾನತೆಯನ್ನು ಅನುಭವಿಸಲಾರದೆ ಬಿಟ್ಟು ಆ ಏಕತಾನತೆಯಿಂದ ಹೊರಬರಲು ರಂಗಪ್ಪನ

ಹಿಂದೆ ಬಂದಿರುತ್ತಾನೆ. ನಗುಬೀಡಿನಿಂದ ಇಬ್ಬರೂ ಉಗ್ರಗಿರಿ ಕಾಣುವ ಕಡೆಗೆ ಹೊರಡುತ್ತಾರೆ. ಮೊದಲು ಪುಸ್ತಕದ ಅಂಗಡಿ ಇಡುತ್ತೇನೆಂದವನು ಈಗ ಜಮೀನನ್ನು ಕೊಳ್ಳಲು ಆಸಕ್ತಿ ತೋರುವುದು ರಂಗಪ್ಪನಿಗೆ ಆಶ್ಚರ್ಯ ಉಂಟುಮಾಡುತ್ತಿದೆ.

ಮೊದಲಲ್ಲಿ ರಂಗಪ್ಪನಿಗೆ ಜಗನ್ನಾಥನ ಚರ್ಯೆ ಮಾನಸಿಕ ಅಸ್ವಸ್ಥತೆಯಂತೆ ಕಂಡರೂ ತಲೆ ನೆಟ್ಟಗೇ ಇದೆ ಎಂದೆನ್ನಿಸಿತು. ಹೀಗೆ ರಂಗಪ್ಪನಿಗೆ ಜಗನ್ನಾಥ ನಿಗೂಢವಾಗಿ ಕಂಡನು. ಈ ಜಗನ್ನಾಥನ ಚರ್ಯೆಯ ಮೇಲೆ ಸಂಶಯ ಮಿಶ್ರಿತ ಕುತೂಹಲವೂ ಜನಿಸಿತು. ಲಟಾರಿ ಕಾರಿನಿಂದ ಉಗ್ರಗಿರಿಯ ಕಡೆಗೆ ಹೊರಟವರು ಭೀಕರ ಮಳೆಗೆ ಸಿಲುಕಿಕೊಳ್ಳುತ್ತಾರೆ. ಮುಂದೆ ಹೋಗಲಾರದೆ ಕಾರು ಕೆಸರಿನಲ್ಲಿ ಹೊತು ಹೋಗುತ್ತದೆ. ಕಾರಿನ ಚಕ್ರವನ್ನು ಮೇಲೆತ್ತಲಾರದಂತೆ ಹೂತು ಹೋಗಿ, ಮುಂದೆ ದಾರಿಯೂ ಇಲ್ಲವಾಗಿ ಊರ ಗಡಿಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾರೆ. ಅದೇ ಊರಿನಲ್ಲಿ ಸಿಕ್ಕಿ ಹಾಕಿಕೊಂಡಿರುವ ಗೋಪಾಲಯ್ಯನವರ ಪರಿಚಯ ಇವರಿಗಾಗುತ್ತದೆ.

ವ್ಯಕ್ತಿ ನಿಷ್ಠ ನೆಲೆಯಲ್ಲಿ ಬದುಕನ್ನು ಅರ್ಥೈಸಿಕೊಳ್ಳಲು ಹೊರಟವರಿಗೆ ಅನುಭವವೇ ದಾರಿಯಾಗಿತ್ತು. ತಮಗಾಗುವ ಅನುಭವದ ಹಿನ್ನೆಲೆಯಿಂದ ಜೀವನದ ಅರ್ಥ ಹುಡುಕುವುದಕ್ಕೆ ಬದಲಾಗಿ ಅನುಭವದ ಬೆನ್ನು ಹತ್ತಿದವರ ವಿಶ್ಲೇಷಣೆ ಇಲ್ಲದೆ ಮತ್ತು ತಮಗಾಗುವ ಅನುಭವವೇ ಅರಿವನ್ನು ಕಂಡುಕೊಳ್ಳುವ ಮಾರ್ಗ ಎಂದು ಬಾವಿಸಿದ್ದವರಿಗೆ ಅನುಭವವೂ ಎಲ್ಲವನ್ನೂ ತರೆದು ತೋರಿಸಲಾರದು. ಹಾಗೆ ಎಲ್ಲವನ್ನು ಅರ್ಥೈಸಿಕೊಳ್ಳುವುದೇ ಒಂದು ಭ್ರಮೆ ಎಂಬ ನಿಲುವಿಗೆ ಬಂದು ನಿಲ್ಲುತ್ತಾರೆ. ಜಮೀನು ಕೊಳ್ಳುವ ಕಾರಣವನ್ನು ತಮಗೆ ತಾವೇ ಹೊಂದಿಕೊಂಡು ಜಗನ್ನಾಥ, ರಂಗಪ್ಪ ನವಿಲು ಗುಂದದ ಕಡೆಗೆ ಹೊರಡುತ್ತಾರೆ. ಆದರೆ ರಸ್ತೆ ಸರಿಯಿಲ್ಲದ ಕಾರಣ ಹಳೆಯ ಕಾರಿನಿಂದ ಊರ ಗಡಿಯಲ್ಲೇ ಸಿಕ್ಕಿ ಹಾಕಿಕೊಳ್ಳುತ್ತಾರೆ. ಭೀಕರ ಮಳೆ, ಬಿರುಗಾಳಿಯ ಜೊತೆಗೆ ಭೂಕಂಪದಂತಹ ಪ್ರಾಕೃತಿಕ ವಿಕೋಪದ ಮಧ್ಯೆ ಅನುಭವದ ಬೆನ್ನತ್ತಿ ಹೊರಟ ಜಗನ್ನಾಥನಿಗೆ ಇಂತಹ ಅನುಭವದೆದುರು ತತ್ತರಿಸಿ ಹೋಗುವಂತಾಗುತ್ತದೆ. ಭೂಕಂಪದಂದಾಗಿ ಜರಿಯುತ್ತಾ ಹೋಗುವ ಗುಡ್ಡ ಭೀಕರವಾದ ಬಿರುಗಾಳಿ ಮನುಷ್ಯನ ಎಲ್ಲ ಪ್ರಯತ್ನಗಳನ್ನು ನಿಷ್ಫಲಗೊಳಿಸುತ್ತಾ ಅವನ ಮಿತಿಯನ್ನು ತಿಳಿಸುತ್ತದೆ. ಇನ್ನೊಂದೆಡೆ ಮೂವರು ಒಬ್ಬರಿಗೊಬ್ಬರು ತೆರೆದುಕೊಳ್ಳದೇ ಹೋಗುವ ಸ್ಥಿತಿ ಕಾಣಿಸುತ್ತದೆ. ರಂಗಪ್ಪನಿಗೂ ಜಗನ್ನಾಥನಿಗೂ ಯಾವುದೋ ಒಂದು ಕಲಾತೀತ ಪ್ರಪಂಚಕ್ಕೆ ಕಾಲಿಟ್ಟಂತೆನಿಸಿ ಬರೀ ಬೆಳಕು, ಕತ್ತಲುಗಳ ಛಾಯಾ ನರ್ತನದಂತೆ ಜಗತ್ತು ಭಾಸವಾಗತೊಡಗಿತು. "ಮೊದ ಮೊದಲು ರಂಗಪ್ಪ ಗೋಪಾಲಯ್ಯ ಏನೋಒಂದು ತರ ತನ್ನನ್ನು ಅನುಕರಿಸುತ್ತಿದ್ದಾರೆಂದು ಅನ್ನಿಸಿ ಆದಷ್ಟು ಮೌನವಾಗಿದ್ದ. ಆದರೂ ಅವನ ಚರ್ಯೆ

ನಡವಳಿಕೆಗಳ ಭಂಗಿಯನ್ನೇ ಗೋಪಾಲಯ್ಯ ಅನುಕರಿಸಿ ನಕಲಿ ಮಾಡುವಂತೆ ಕಾಣಿಸುತ್ತಿತ್ತು. ಹಾಗಾಗಿ ರಂಗಪ್ಪ ಇನ್ನೂ ಮೌನಿಯೂ ಆಗತೊಡಗಿದ"2

ಹೀಗೆ ವರ್ತಮಾನಕ್ಕೆ 'ಆಗುವಿಕೆ'ಯ ಕಡೆಗೆ ಚಲಿಸುತ್ತಿರುವುದನ್ನು ಕೃತಿ ಧ್ವನಿಸುತ್ತದೆ. ಗೋಪಾಲಯ್ಯ ಬೇಸರದಿಂದ "ಯಾರಾದರೂ ಗಿರಾಕಿ ಸಿಕ್ಕರೆ ಅತ್ತಲಾಗಿ ತೋಟ ಕೊಟ್ಟು ಕೈ ತೊಳೆದುಕೊಳ್ಳುತ್ತಿದ್ದೆ" ಎಂದು ಉದ್ಗರಿಸಿದರು. ರಂಗಪ್ಪ ವಿನೋದಕ್ಕೆಂಬಂತೆ ಜಗನ್ನಾಥ ಹಿಂದೆ ಹೇಳಿದ್ದ ಸುಳ್ಳನ್ನು ಮರೆತು "ಹಾಗಿದ್ದರೆ ಇಲ್ಲೇ ಒಬ್ಬ ಗಿರಾಕಿ ಇದ್ದಾರೆ"3 ಎಂದುಬಿಟ್ಟು ಅಷ್ಟರಲ್ಲಿ ಪಕ್ಕನೆ ಆತನಿಗೆ ಅಚಾತುರ್ಯವಾಯ್ತು ಎಂದೆನ್ನಿಸಿತು. ಮಾತುನಿಲ್ಲಿಸಿದ

"ರಂಗಪ್ಪನಿಗೆ ಜಗನ್ನಾಥ ಯಾಕೆ ಇಲ್ಲಿಯವರೆಗೂ ಬಂದ, ಯಾಕೆ ಜಮೀನು ಕೊಳ್ಳುತ್ತೇನೆಂದು ಹೇಳುತ್ತಾನೆ ಅರ್ಥವಾಗಲಿಲ್ಲ ಜಗನ್ನಾಥನಿಗೆ ಗೋಪಾಲಯ್ಯ ಯಾರು, ಏಕಾಗಿ ಬಂದನು, ಈ ಬದುಕಿನ ಅರ್ಥವೇನು ಗೊತ್ತಾಗಲಿಲ್ಲ. ಗೋಪಾಲಯ್ಯನಿಗೆ ಯಾಕೆ ಇವರು ಸುಳ್ಳುಗಳನ್ನು ತಮ್ಮ ಬಗ್ಗೆ ಹೇಳಿಕೊಳ್ಳುತ್ತಾರೆಂದೂ ಗೊತ್ತಾಗಲಿಲ್ಲ. ಯಾರೂ ಮತ್ತೊಬ್ಬರಿಗೆ ಅರ್ಥವಾಗದೆ ಯೋಚಿಸಿದವ ಒಬ್ಬೊಬ್ಬರೂ ಮತ್ತೊಬ್ಬರಿಗೆ ರಹಸ್ಯವಾಗುತ್ತಾ ನಡೆದರು.4 ಮುಂದೆ ಅಲ್ಪಸಲ್ಪ ಪರಿಚಯದ ನಂತರ ಒಬ್ಬರಿಗೊಬ್ಬರು ಅರ್ಥವಾಗತೊಡಗಿದರು ಅದಕ್ಕಿಂತ ಅವರ ನಡುವೆ ಹೆಚ್ಚು ನಿಗೂಢತೆಯ ಅಂಶ ಕಂಡುಬರುತ್ತದೆ. ಪ್ರಕೃತಿಯಿಂದ ಮರಸರ ಕಾಂಪ್ರ ಲೋರಿಯರ ಜೀವನ ಕ್ರಮದಿಂದ ಬೆಳೆಯುತ್ತ ಕ್ರಮೇಣ ಅವರನ್ನೇ ಆವರಿಸತೊಡಗುತ್ತದೆ. ಕಣ್ಣಿಗೆ ಕಾಣುವ ಪ್ರಕೃತಿ ತನ್ನೊಳಗೆ ಅಡಗಿಸಿಕೊಂಡಿರುವಂತಹದ್ದನ್ನೇ ವ್ಯಕ್ತಿ ಅವನಿಗೆ ಅರಿವೇ ಇಲ್ಲದೆ ನಿಗೂಢತೆಯ ಅಂಶ ಒಳಗೊಂಡಿದ್ದಾನೆ ಎನ್ನುವಲ್ಲಿಗೆ ಕೃತಿ ಬಂದು ತಲುಪುತ್ತದೆ. ಪ್ರಕೃತಿಯನ್ನು ಹೇಗೆ ಅರ್ಥೈಸಿಕೊಳ್ಳಲು ಅಸಾಧ್ಯವೋ ಅಂತೆಯೇ ಮನುಷ್ಯನನ್ನೂ ಸಹ ಅರ್ಥೈಸಿಕೊಳ್ಳಲು ಅಸಾಧ್ಯ ಎಂಬ ಧ್ವನಿಯೊಡನೆ, ಕರಾಳ ಛಾಯೆಯಂತೆ ಬೆಂಬತ್ತಿದ್ದ ಭೂತದಂತೆ ಕಾಡುವ ಉಗ್ರಗಿರಿ ಮೃತ್ಯುಛಾಯೆಯಂತೆ ಅದರ ಸುತ್ತಲೂ ಇವರೆಲ್ಲಾ ತಿರುಗುತ್ತಿದ್ದರೂ ಭೂಕಂಪದ ಸಂದರ್ಭದಲ್ಲಿ ಅದೇ ಕುಸಿಯುವ ಉಗ್ರಗಿರಿ ಅಡಗಿಸಿಕೊಂಡಿರಬಹುದಾದ ಸಾಧ್ಯತೆಯಾದರೂ ಏನನ್ನು ಎಂಬ ಅನುಮಾನ ಎಬ್ಬಿಸುತ್ತದೆ.

ಅನುಭವವೂ ಮನುಷ್ಯನನ್ನು ಅನಾಥನನ್ನಾಗಿಸುತ್ತದೆ ಎಂಬ ಗೋಪಾಲಯ್ಯನವರ ಹೇಳಿಕೆಯಂತೆ ಈ ಬದುಕಿನ ಅರ್ಥವನ್ನು ಅರಿಯಲು ತನ್ನ ಅನುಭವವನ್ನೇ ಮಾರ್ಗ ಮಾಡಿಕೊಂಡವನಿಗೆ ಆ ಮಾರ್ಗದ ಮಿತಿಯೂ ಅರಿವಾಗುತ್ತದೆ. ಜೊತೆಗೆ ಮಾರ್ಗವೇ

ಮುಚ್ಚಿಹೋದಾಗ ಅರಿಯುವುದಾದರೂ ಏನನ್ನು? ನವಿಲುಗುಂದಕ್ಕೆ ಬಂದು ಊರಗಡಿಯಲ್ಲಿಯೇ ಮುಚ್ಚಿ ಹೋಗುವಂತೆ 'ಅನುಭವದ' ದಾರಿ ಹಿಡಿದು ಬಂದವರ ಸ್ಥಿತಿಯೂ ಇದೇ ಆಗಿದೆ.

ಆಯ್ಕೆ ಜವಾಬ್ದಾರಿ, ಅನುಭವ ಇರುವಿಕೆಯಿಂದ ಆಗುವಿಕೆ ಇತ್ಯಾದಿ ಅಸ್ತಿತ್ವವಾದದ ತಾತ್ವಕತೆಗಳೇಲ್ಲಾ ಬದುಕಿನ ಬಿರುಗಾಳಿಗೆ ಸಿಕ್ಕಿ ಕೊಚ್ಚಿ ಹೋಗುತ್ತವೆ. ಮನುಷ್ಯನಾಚೆಯಿರುವ ಪ್ರಕೃತಿ ಅವನೊಳಗಿನ ಪ್ರಕೃತಿ ಇವು ಯಾವ ತಾತ್ವಿಕತೆಗೂ ನಿಲುಕದೇ ಹೋಗುತ್ತಿರುವುದನ್ನು ಕೃತಿಯಲ್ಲಿ ಗುರ್ತಿಸಬಹುದಾಗಿದೆ. ಜಗನ್ನಾಥ "ನಾನೊಬ್ಬ ಬರಹಗಾರ, ನಾನಿಲ್ಲಿ ಜಮೀನು ಕೊಳ್ಳಬೇಕೆಂದಿದ್ದರ ಮುಖ್ಯೋದ್ದೇಶ ಆಸ್ತಿ ಮಾಡುವುದಲ್ಲ, ಅನುಭವ"5 ಹೀಗೆ ಅನುಭವದ ಮೂಲಕ ಜಗತ್ತನ್ನು ಅರಿಯಲು ಹೊರಡುತ್ತೇನೆಂದು ಹೊರಟ ಜಗನ್ನಾಥನಿಗೆ ಅನುಭವವೇ ಒಂದು ತೊಡಕಾಗಲು ಕಾರಣವಾಗುತ್ತದೆ. ಏಕೆಂದರೆ ಅನುಭವದಿಂದ ಅರ್ಥ ಪಡೆಯುವ ಶಕ್ತಿ ಕಳೆದುಕೊಳ್ಳುತ್ತಾ ಹೋಗುವುದು.

ಅಂದರೆ ತಮ್ಮ ಅನುಭವಕ್ಕೆ ತಾವೇ ಪರಕೀಯರಾಗುವುದು. ಹೀಗೆ ಅನುಭವದ ರೂಪದಲ್ಲಿ ಜಗತ್ತನ್ನು ಅರಿತುಕೊಳ್ಳುವುದಕ್ಕೆ ಪ್ರಯತ್ನಿಸಿದಂತೆಲ್ಲಾ ಅನುಭವವೇ ಮನುಷ್ಯನನ್ನು ಅರಿವಿನಿಂದ ಹೊರಗೆ ಇಡುತ್ತಾ ಹೋಗುವುದನ್ನು ಕಾಣಬಹುದು. "ಗೋಪಾಲಯ್ಯನ ದೃಷ್ಟಿ ಸರಕ್ಕನೆ ತೊಡೆಯ ಮೇಲೆ ಎತ್ತಿಟ್ಟುಕೊಂಡಿದ್ದ ಅವರ ಬಲಗಾಲಿನ ಕಡೆಗೆ ಹರಿಯಿತು. ಈವರೆಗೂ ಅವರು ಅವರ ಪಾದಗಳನ್ನು ಗಮನಿಸಿಯೇ ಇರಲಿಲ್ಲ. ಬೆಳ್ಳಗೆ ರಕ್ತಹೀನತೆಯ ಲಕ್ಷಣಗಳಿದ್ದ ಆ ಪಾದದ ಚರ್ಮವೆಲ್ಲಾ ಒರಟಾಗಿ ಗಟ್ಟಿಯಾಗಿತ್ತು. ಮಳೆ ಇಲ್ಲದ ಎರೆ ಭೂಮಿಯಂತೆ ಬಿರಿದುಕೊಂಡು ಮೊಸಳೆಯ ಚರ್ಮದಂತೆ ಕಾಣುತ್ತಿತ್ತು. ಗೋಪಾಲಯ್ಯ ಇದು ತಮ್ಮ ಕಾಲೇ ಎಂದು ಅಪ್ರತಿಭರಾಗಿ ಇನ್ನೂ ಕಣ್ಣಿಟ್ಟು ವಿವರಗಳನ್ನು ನಿರೀಕ್ಷಿಸಿದರು. ಹಸ್ತಮುದ್ರಿಕೆ ನೋಡುವವರ ರೀತಿ ನೋಡತೊಡಗಿದರು. ಅಲ್ಲಿನ ಬಿರುಕು ರೇಖೆ ಇತ್ಯಾದಿಗಳಲ್ಲಿ ಅವರ ಮೂರು ನಾಲ್ಕು ವರುಷದ ಇಡೀ ಘಟನಾವಳಿಗಳ ಭೂತಕಾಲ ಹರಿದು ಹೋಯ್ತು ಗೋಪಾಲಯ್ಯ ತನ್ನ ದೇಹವನ್ನು ನೋಡಿಕೊಂಡೇ ಪರಕೀಯತೆಯನ್ನು ಅನುಭವಿಸುತ್ತಾನೆ" ಕೆಲವು ಸಂದರ್ಭಗಳಲ್ಲಿ ಪ್ರಜ್ಞೆಯನ್ನೇ ನಂಬಿ ಭಾವುಕತೆಯಿಂದ ಪಡೆಯಬಹುದಾದ್ದನ್ನು ಕಳೆದುಕೊಳ್ಳುತ್ತಿರುವ ಮನುಷ್ಯನ ದುರಂತ ಸ್ಥಿತಿಯನ್ನು ಧ್ವನಿಸುತ್ತದೆ ಮತ್ತೆ ಅತಿಯಾದ ವೈಚಾರಿಕತೆ ಮನುಷ್ಯನನ್ನು ಪ್ರಕೃತಿಗೂ, ಬದುಕಿಗೂ, ಕೊನೆಗೆ ತನಗೂ ಅವನನ್ನು ಪರಕೀಯನನ್ನಾಗಿಸುತ್ತದೆ ಎಂಬುದನ್ನು ಗುರ್ತಿಸಬಹುದು.

ಜಗನ್ನಾಥ "ಸಾಹಿತಿ ತನ್ನ ಬರವಣಿಗೆಯಿಂದ ಬದುಕ ಹೊರಟವನು ಸಾಹಿತಿ ಎಂದು ಹೆಸರುವಾಸಿಯಾದವನು, ತಾನಿನ್ನು ಬರೆಯಲಾರೆ ಎಂದೆನ್ನಿಸಿದರೆ ಹೇಗಾಗಬಹುದು ಯೋಚಿಸಿ ಆದಕ್ಕಿಂತ ಘೋರ ಕಥೆ ನಮ್ಮ ಹಿರಿಯರು ರಾಮಯ್ಯ ಅಂತ, ಸಂಗೀತಗಾರರು. ಅವರು

ಹಾಡಿಯೇ ಬದುಕಬೇಕಿತ್ತು. ಕುಳಿತು ಹಾಡಿ, ಹಾಡಿ ಕಾಲುಗಳ ಪಾರ್ಶ್ವವಾಯು ಹೊಡೆಯಿತು. ಆದರೂ ಹಾಡುತ್ತಿದ್ದರು. ಅನಂತರ ಒಂದು ದಿನ ತಾಳ ಹಾಕುವ ಬಲಗೈಗೆ ಪಾರ್ಶ್ವವಾಯು ಬಂತು, ಆದರೂ ಹೊತ್ತು ತಂದು ಕೂರಿಸಿದರೆ ಹಾಡುತ್ತಿದ್ದರು. ಅವರಿಗೆ ಈ ಪಾರ್ಶ್ವವಾಯು ಮುಂದುವರೆಯತ್ತಿದೆ ಎಂದೆನ್ನಿಸಿತೋ ಬ್ಲೇಡಿನಲ್ಲಿ ಕುತ್ತಿಗೆ ಕುಯ್ದುಕೊಂಡು ಆತ್ಮಹತ್ಯೆ ಮಾಡಿಕೊಂಡರು ಅವರು ಬರೆದಿಟ್ಟಿದ್ದರಂತೆ ನಾನು ಆತ್ಮಹತ್ಯೆ ಸ್ವಾತಂತ್ರ್ಯವನ್ನು ಉಳಿಸಿಕೊಂಡಿದ್ದೇನೆ ಎಂದು. ಇದನ್ನು ಹೇಳಿದ್ದೇಕೆಂದರೆ ನನ್ನ ಪರಿಸ್ಥಿತಿ ಹಾಗೆ ಆಗಿತ್ತು..." ಜಗನ್ನಾಥ ಭಾವುಕತೆಯ ಪರಿಸರ ನಿರ್ಮಾಣ ಮಾಡಿಕೊಳ್ಳುತ್ತಿದ್ದಾಗ ರಂಗಪ್ಪ ಈ ನಡುವೆ ಬಾಯಿ ಹಾಕಿ "ಅದು ಹೇಗಯ್ಯ ನಿನ್ನ ಪರಿಸ್ಥಿತಿ ಸಂಗೀತಗಾರನ ಪರಿಸ್ಥಿತಿ ಒಂದೇ ಆಗಿತ್ತು? ಆತ ಎಡಗೈಗೂ ಲಕ್ವ ಹೊಡೆದರೆ ಕೊನೆಗೆ ಆತ್ಮಹತ್ಯೆಯೂ ಸಾಧ್ಯವಿಲ್ಲೆಂದು ಹಾಗೆ ಮಾಡಿದರು. ನೀನು ಕತೆ ಬರೆಯಲಾದುದಕ್ಕೆ ಇಷ್ಟೆಲ್ಲಾ ಹೇಳೋದು ಸರಿಯಾ ನಿನ್ನ ಭಾವನೆಗಳಿಗೂ ನಿನಗೆ ಸಂಬಂಧಿಸಿದ ಅನುಭವಗಳಿಗೂ ಸರಿಯಾದ ಸಂಬಂಧ ಹಾಗೂ ಪ್ರತಿಪಾದನೆ ಇಲ್ಲ"[6] ಜಗನ್ನಾಥನ ಸಂಪೂರ್ಣ ಅನುಭವವನ್ನು ವೈಚಾರಿಕತೆಯಿಂದ ತರ್ಕಾತೀತವಾಗಿ ಚಿಂತಿಸುತ್ತಾರೆ, ರಂಗಪ್ಪ ಹೀಗೆ ಅವರನ್ನು ಅರ್ಥೈಸಿಕೊಳ್ಳುವಿಕೆಯಲ್ಲಿ ಅನುಭವಿಸುವ ಪರಕೀಯತೆಯನ್ನು ಗಮನಿಸಬಹುದು ಅನುಭವ, ಅದರ ವಿಶ್ಲೇಷಣೆ ಎಂದು ಬೆನ್ನು ಹತ್ತಿದವರು ಬರಿಯ ವೈಚಾರಿಕತೆಯಲ್ಲಿ ಮುಳುಗಿ, ತಾವು ಇರುವ ಸುತ್ತಲಿನ ಪರಿಸರ, ಸಾಮಾಜಿಕ ಪರಿಸರ ಎಲ್ಲಕ್ಕೂ ಹೊರಗಿನವರಾಗಿದ್ದಾರೆ. ವಿಶ್ಲೇಷಿಸಿಕೊಳ್ಳುವ ಕ್ರಿಯೆಯಲ್ಲಿ ಎಲ್ಲವೂ ತಾರ್ಕಿಕತೆಯಿಂದ ಕೂಡಿದ ಮಾದರಿಯಾಗಿದೆ. ಹಾಗೂ ಆ ಅನುಭವದ ಎದುರಿನಲ್ಲಿ ಪಡೆದ ಅರಿವು ಯಾವುದಾಗಿತ್ತು ಎಂದರೆ ದಿಗ್ಭ್ರಾಂತ ಸ್ಥಿತಿ ಬೆಳಕಿಲ್ಲದ ನಿರಂತರ ಮಳೆ ಸುರಿಯುತ್ತಿರುವ ಅರ್ಧ ರಾತ್ರಿಯಲ್ಲಿ ಭೂಕಂಪದಿಂದ ಭೋರ್ಗರೆವ ಉಗ್ರಗಿರಿಯ ಕುಸಿತದ ಸಂದರ್ಭದಲ್ಲಿ ಗೋಪಾಲಯ್ಯ ಜಗನ್ನಾಥನನ್ನು ಎಬ್ಬಿಸಿ "ಜಗನ್ನಾಥ ಏಳಿ! ಗಿರಿ ಎಚ್ಚೆತ್ತಿದೆ! ಕೇಳಿ! ಅದು ಉಸುರುವ ಪಿಸು ಮಾತು" ಎಂದು ಹೇಳುತ್ತಾ ಮುಂದುವರೆದು "ಇದು ಜಗತ್ತಿನ ಕೊನೆ!!... ಎಲ್ಲಾ ಅನುಭವಗಳ ಶಿಖರ!! ಇದು ನಾವೂ ಹೌದು. ಇನ್ನು ಬೆಳಗಾಗುವದೇ ಇಲ್ಲ ಏಳಿ ಎಚ್ಚರಾಗಿರಿ!" ಜಗನ್ನಾಥನಿಗೆ ಗಾಬರಿಯಯ್ತು. ಗೋಪಾಲಯ್ಯ ಇದೇಕೆ ಹೀಗೆ ಮಾತನಾಡುತ್ತಿದ್ದಾರೆ ಎಂದು![7] ನಂತರದ ವರ್ತನೆ ಅವನಿರುವ ಸ್ಥಿತಿ ಇನ್ನೇನು ಗಿರಿ ಕುಸಿದು ಮನೆಯ ಮೇಲೆ ಉರುಳಿ ಬೀಳುತ್ತದೆ ಎನ್ನಿಸಿದಾಗ "ಜಗನ್ನಾಥ ಬೆಳಗಾಗುತ್ತದೆ ಎಂಬ ಭರವಸೆಯೇ ಅಳಿಸಿಹೋದಂತೆ ಎನ್ನಿಸಿತು." "ಜಗನ್ನಾಥ ಅವನಿಗಾದ ಅನುಭವದಿಂದ ಅಘಾತದಿಂದ ಇನ್ನೂ ಚೇತರಿಸಿಕೊಂಡಿರಲಿಲ್ಲ. ಅವನಿಗೆ ಏನೋ ಒಂದು ಬಗೆಯ ಅದೀರತೆ ಸುಯ್ಯನೆ ಹೃದಯದಲ್ಲಿ ಸಂಚರಿಸಿತು, ಹೀಗೆ ನಿಜವಾದ ಮನುಷ್ಯನ ಅಸ್ತಿತ್ವದ ಅಳಿವು –ಉಳಿವಿನ ಸಮಸ್ಯೆಯ ನೆಲೆಯಲ್ಲಿ ಇಂತಹ ಅನುಭವ ಕೊಡುವ ಅರ್ಥ ಪಡೆಯುವ ಅರಿವು ದಿಗ್ಭ್ರಾಂತ ಸ್ಥಿತಿ

ಆಗ ಗೋಪಾಲಯ್ಯ ಹೇಳುವ ಮಾತು "ಈ ಕಾದಂಬರಿಗೆ ಪಾತ್ರವಿಲ್ಲ ಈ ಲೇರ್ಖಕ್ಕೆ ಪಾತ್ರೆ ಇಲ್ಲ" ಅನುಭವದ ಮೂಲದ ಬದುಕನ್ನು ಅರಿಯಲು ಹೊರಟವನಿಗೆ ಅನುಭವ ಕಲಿಸಿಕೊಡುವ ಪಾಠ ಇದಾಗಿದೆ." ಎಲ್ಲವನ್ನು ವಿಶ್ಲೇಷಣೆ ವೈಚಾರಿಕತೆಯ ಮೂಲಕ ಅರ್ಥೈಸಿಕೊಳ್ಳಬಹುದು ಎಂಬ ಅಹಂಗೆ ಎದುರಾಗುವುದು ತನ್ನನ್ನು ಬಿಟ್ಟು ಕೊಡದ ನಿಗೂಢ. ಎಲ್ಲಕ್ಕಿಂತ ಅನುಭವದ ಮೂಲಕ ಸುತ್ತಲಿನ ನಿಗೂಢವನ್ನು ಅರ್ಥಮಾಡಿಕೊಳ್ಳಲು ಹೊರಟವನಿಗೆ ನಿಗೂಢತೆ ಎಂದರೇನು ಎಂಬುದು ಹೊರಗಿನ ಗ್ರಹಿಕೆಯಾಗಿದೆ. ರಂಗಪ್ಪ ಜಗನ್ನಾಥರು ತಮ್ಮನ್ನು ತಾವೇ ಅರ್ಥಮಾಡಿಕೊಳ್ಳದವರು. ದೃಷ್ಟಿಯನ್ನು ತಮ್ಮ ಕಡೆಗೆ ಹೊರಳಿಸಲಾರದವರು ಸುತ್ತ-ಮುತ್ತಲಿನ ಜಗತ್ತಿನಲ್ಲೆಲ್ಲಾ ನಿಗೂಢತೆಯ ಅರಿಯುವಿಕೆಗಾಗಿ ಹುಡುಕಾಡುತ್ತಾರೆ. ವ್ಯಕ್ತಿತ್ವದಿಂದ ವ್ಯಕ್ತಿತ್ವಕ್ಕೆ ಬದಲಾಗುತ್ತಾ ಬರಿಯ ಹುಡುಕಾಟದಲ್ಲಿರುವವರಿಗೆ ತಮ್ಮದೇ ಆದ ಸ್ವಂತ ವ್ಯಕ್ತಿತ್ವವಿಲ್ಲ. ಗೋಪಲಯ್ಯನಂತೂ ತನ್ನನ್ನು ತೆರೆದು ಕೊಳ್ಳುವುದು ಹಾಗೂ ರಂಗಪ್ಪ ಜಗನ್ನಾಥನಿಗೆ ಪರಿಚಯಿಸಿಕೊಳ್ಳುವಾಗ ಹೇಳುವ ಮಾತುಗಳು "ನಾನು ಯಾರೆಂದು ನಿಮಗೆ ಪರಿಚಯಿಸಿಕೊಳ್ಳಲಿ! ಬುದ್ಧನಿಗೆ, ಪರಮಹಂಸರಿಗೆ ಬಂದಂತ ಪ್ರಶ್ನೆಯಲ್ಲ ಇದು, ಜಗನ್ನಾಥ, ತತ್ವ ಶಾಸ್ತ್ರಕ್ಕೂ ಇದಕ್ಕೂ ಸಂಬಂಧವೇ ಇಲ್ಲ. ನನ್ನ ಜೀವನದ ಭೌತ ಸತ್ಯ ಇದು. ಮೊದ ಮೊದಲು ನನ್ನನ್ನು ನಾನು ಸುಬ್ಬರಾಯ ಎಂದು ತಿಳಿದಿದ್ದೆ, ಅದೇ ಹೆಸರಿನಲ್ಲಿ ಪಧ್ಯ ಬರೆಯತ್ತಿದ್ದೆ, ಆಗ ನಾನೂ ಒಬ್ಬ ಅಪ್ರಮುಖ ಬರಹಗಾರನಾಗಿದ್ದೆ. ಇದರೊಡನೆ ಆಯುರ್ವೇದ, ವೈದ್ಯ, ವಿಜ್ಞಾನಿ ಎಲ್ಲಾ ಆಗಿದ್ದೆ. ಮೊದಲಿನಿಂದಲೂ ಅನೇಕ ವ್ಯಕ್ತಿತ್ವಗಳಾಗಿ ಬಾಳುವುದು ನನಗೊಂದು ವಿನೋದವಾಗಿ ಹೋಗಿತ್ತು"8

"ನನ್ನ ಜೀವನದಲ್ಲಿ ಈ ದೇಹ ಮಾಂಸಾಹಾರ, ಮದ್ಯಪಾನ, ಸೂಳೆ ಸಹವಾಸ ಎಲ್ಲಾ, ಎಲ್ಲಾ ಅನುಭವಿಸಿದೆ. ಆದರೆ ಯಾವುದೂ ಚಟವಾಗಿ ನನ್ನ ಚಿರಂತನ ವ್ಯಕ್ತಿತ್ವಕ್ಕೆ ಅಂಟಲೇ ಇಲ್ಲ. ಏಕೆಂದರೆ ನನಗೆ ಚಿರಂತನ ವ್ಯಕ್ತಿತ್ವ ಒಂದು ಇರಲೇ ಇಲ್ಲ ಈ ಒಂದೇ ದೇಹದಲ್ಲಿ ಅಸಂಖ್ಯ ಆತ್ಮಗಳು ಹೊಕ್ಕು, ಹೊರಬಂದಿವೆ ನಿಶ್ಚಿತ ಉದ್ದೇಶ ಒಂದಕ್ಕೆ ಆತ್ಮಾರ್ಪಣೆ ಮಾಡಿಕೊಂಡರೆ ಹೇಗಿರುತ್ತೆ ಗೊತ್ತೆ ಜಗನ್ನಾಥ! ಅದೊಂದು ವಿಚಿತ್ರ ಪರಕಾಯ ಪ್ರವೇಶ"

"ಅಸಂಖ್ಯಾತ ಅನುಭವಗಳು ಎದ್ದೆದ್ದು ಮುಳುಗುವ ಕಡಲು ಈ ಪ್ರಜ್ಞೆ ನಾನೆಂದರೆ ಇದನ್ನೆಲ್ಲಾ ಸೇರಿದ ಜ್ಞಾಪಕ ಒಂದಕ್ಕೂ ಒಂದರ್ಥವೂ ಇಲ್ಲ. ಜಾಧವ್, ಕಾಮತ್, ನರೋನ, ರಾಯಪ್ಪ ಹೀಗೆ ನೂರಾರು ಮಂದಿ ಆಗಿ ಹೋಗಿದ್ದಾರೆ ಈ ದೇಹದಲ್ಲಿ. ಇವರಲ್ಲಿ ಯಾರನ್ನು ನಾನೆಂದು ಆರಿಸಲಿ! ಇವರೆಲ್ಲರಿಂದ ಅರ್ಥ ಹೊರಡಿಸಬಲ್ಲ ಇನ್ನೊಬ್ಬ ಈ ದೇಹದಲ್ಲಿ ಇದ್ದಿದ್ದರೆ ಆಗ ನನ್ನ ವ್ಯಕ್ತಿತ್ವ ನನಗೆ ಇರುತ್ತಿತ್ತು. ಈಗ ನನ್ನ ಗುರುತು ನನಗೇ ಇಲ್ಲ. ಅನುಭವದ ಆಳಕ್ಕೆ

ಇಳಿಯುತ್ತಾ ಬುದ್ಧಿ ಅದರ ಅರ್ಥ ತಿಳಿಯುವ ಸಾಮರ್ಥ್ಯ ಕಳೆದುಕೊಂಡುಬಿಡುತ್ತದೆ. ಅನುಭವ ಎಂಬುದು ನರಮಂಡಲದ ಮೇಲೆ ಹರಿದಾಡುವ ವಿದ್ಯುತ್ತಾಗಿ ಬಿಡುತ್ತದೆ"[9] ಹೀಗೆ ತನ್ನದೇ ಒಂದು ವ್ಯಕ್ತಿತ್ವವಿಲ್ಲದ ವ್ಯಕ್ತಿ ಒಂದರಿಂದ ಮತ್ತೊಂದಕ್ಕೆ ಹಾರಿ ಹೋಗುವ ಕ್ರಿಯೆ. ಅವನ ಸ್ವಂತಕೆಯನ್ನು ರೂಢಿಸಿಕೊಳ್ಳಲಾರದ ಸ್ವರೂಪದ್ದಾಗಿದೆ. ಹೀಗೆ ವ್ಯಕ್ತಿತ್ವವಿಲ್ಲದ ಸ್ಥಿತಿಯಲ್ಲಿ ನಿಗೂಢತೆನ್ನು ಅರ್ಥೈಸಿಕೊಳ್ಳಲಾರದ ಸ್ಥಿತಿ ಸಹಜವೇ ಆಗಿದೆ.

ಜಿ. ಎಚ್. ನಾಯಕರು ಗುರ್ತಿಸುವಂತೆ ಮನುಷ್ಯ ಮತ್ತು ಪರಿಸರ ಮನುಷ್ಯ-ಮನುಷ್ಯರೊಡನೆ, ಮನುಷ್ಯ ಮತ್ತು ಮನುಷ್ಯನೊಳಗಿನ ನಿಗೂಢದ ಆವರ್ತನಶೀಲತೆ ಅನಂತ ಮುಖದೊಡನೆ ಬೆಳೆಯುತ್ತಾ ಹೋಗುತ್ತದೆ. ನಿಗೂಢತೆಯ ತೀವ್ರತೆ ಒಂದಕ್ಕೆ ಒಂದು ತಳುಕು ಹಾಕಿಕೊಳ್ಳುತ್ತಾ ಹೋಗುತ್ತದೆ. ಆದರೆ ಅದರೊಡನೆ ನಿಗೂಢತೆಯನ್ನು ನೋಡುವ ಹಿಂದಿನ ದೃಷ್ಟಿಕೋನ ಅನ್ವೇಷಣೆಯ ರೀತಿಯೂ ಜೊತೆಯಲ್ಲಿಯೆ ಬೆಳೆಯುತ್ತದೆ. ನಿರೂಪಣೆಯ ಕ್ರಮವೂ ಸಹ ತನ್ನ ವಿವರಣೆಯಲ್ಲಿ ಸಂಕೇತಗಳನ್ನು ಬಳಸಿಕೊಳ್ಳುತ್ತಾ ಅಲ್ಲಿನ ಜನರ ನಿರ್ಜೀವ ಸ್ಥಿತಿಯನ್ನು ಅವರು ಸಿಕ್ಕಿ ಹಾಕಿಕೊಂಡಿರುವ ಪರಿಸರದ ಹಿನ್ನಲೆಯಲ್ಲಿ ನಿರೂಪಿಸುತ್ತಾ ಹೋಗುತ್ತದೆ. ವಾಸ್ತವದಲ್ಲಿ ಕಟ್ಟಿಕೊಡುವ ಹಿಂದಿನ ದೃಷ್ಟಿಕೋನವು ಎಲ್ಲೆಲ್ಲಿಯೂ ಚಲನ ರಹಿತ ಸ್ಥಿತಿಯನ್ನೇ ಕಾಣುತ್ತದೆ. ಚಲಿಸಲಾರದ ಕಾರು, ನಿಲ್ಲಲಾರದ ಮಳೆ, ಒಬ್ಬೊರಿಗೊಬ್ಬರು ಅರ್ಥವಾಗದ, ತೆರೆದುಕೊಳ್ಳಲಾರದ ಜನ ಕುಳುಪ ಮರಸರರ ಅನಾಗರಿಕ ವಿಚಿತ್ರ ಜಗತ್ತು ಎತ್ತೆತ್ತ ತಿರುಗಿದರೂ ಕಾಣುವ ಉಗ್ರಗಿರಿ ಮಾತಿಲ್ಲದ ಶಾರಿ- ಇವೆಲ್ಲವೂ ಬೇಸರ ಜಡ್ಡುಬಿದ್ದ ಚಲನರಹಿತ ಸ್ಥಿತಿಯನ್ನೇ ಹೇಳುತ್ತದೆ. ಮತ್ತು ನಿರೂಪಣೆಯು ರಂಗಪ್ಪನ ಪ್ರಜ್ಞೆಯ ಮೂಲಕ ಕಥೆ ಹೇಳಲ್ಪಟ್ಟಿದೆ ಎಂದು ಕೃತಿಯ ಆರಂಭದಲ್ಲಿಯೇ ಹೇಳಿದ್ದರೂ ಕಥೆಯೊಳಗೆ ಹಾಗೆ ಕಾಣಿಸುವುದಿಲ್ಲ, ಬದಲಾಗಿ ನಿರೂಪಣೆಯ ಸರ್ವಸಾಕ್ಷಿಯ ಮಾದರಿಯ ಬರವಣಿಗೆಯಂತೆ ಕಾಣಿಸಿದರೂ ಜಿ. ಎಚ್. ನಾಯಕರು ಹೇಳುವಂತೆ "ಮನುಷ್ಯನಿಗೆ ಸರ್ವ ಸಾಕ್ಷಿತ್ವ ಎಂಬುದೇ ಇಲ್ಲ. ಕಾಣುವುದರ ಆಚೆಗೆ ಇರುವ ಕಾಣದ್ದು ನಿಗೂಢವಾದದ್ದು ಇದ್ದೇ ಇರುತ್ತದೆ ಎಂಬುದು ಈ ಕಾದಂಬರಿಯ ತಾತ್ವಿಕ ದೋರಣೆಯ ಕೇಂದ್ರ ಅಂಶವಾಗಿರುವುದೇ ಈ ಬಗೆಯ ತಂತ್ರವಿಧಾನಕ್ಕೂ ಕಾರಣವಾಗಿದೆ. ಈ ಬಗೆಯ ತಂತ್ರವಿಧಾನವು ಕೃತಿಯಲ್ಲಿರುವ ಕರ್ತೃವೊಬ್ಬನ ಪ್ರಜ್ಞಾಕೇಂದ್ರದಿಂದ ಕೃತಿಯ ವಿವರಗಳನ್ನೆಲ್ಲಾ ತೆರೆಯುವ ಮತ್ತು ಅವುಗಳಿಗೆ ಅರ್ಥಧಾರಣ ಮೂಡಿಸುವ ರೀತಿಯ ನವ್ಯ ತಂತ್ರಕ್ಕಿಂತ ಭಿನ್ನವಾದದ್ದು.

ಸರ್ವ ಸಾಕ್ಷಿತ್ವ ಸಾಧ್ಯವಿಲ್ಲದ ಸ್ವ ಪ್ರಜ್ಞೆಯ ವ್ಯಕ್ತಿಯ ಆಳಕ್ಕೆ ಇಳಿದು ಏನನ್ನು ಕಂಡುಕೊಳ್ಳದ ಬಗೆಯದ್ದಾಗಿದೆ. ರಂಗಪ್ಪನ ಪ್ರಜ್ಞೆ, ಜಗನ್ನಾಥನ ಪ್ರಜ್ಞೆ, ಗೋಪಾಲಯ್ಯನ ಪ್ರಜ್ಞೆ ಇವು ಮೂರನ್ನು

ಗಮನಿಸುತ್ತಿರುವ ಒಂದು ನಿರೂಪಣಾ ವಿಧಾನ. ಈ ಬ ಗೋಚರಿಸುತ್ತದೆ. ಹಾಗೆಯೇ ನಿರೂಪಣೆಯಲ್ಲಿ, ಅಭಿವ್ಯಕ್ತಿಯ ಕ್ರಮದಲ್ಲಿ ಬಳಸಿಕೊಳ್ಳುತ್ತಿದ್ದ ಸಂಕೇತಗಳು ಕೃತಿಯ ಆರಂಭದಿಂದಲೇ ಕಂಡುಬರುವ ಕೆಟ್ಟುಹೋದ ಕಾರು, ಮಳೆ, ಗಾಳಿ, ಉಗ್ರಗಿರಿ ಇವೆಲ್ಲವೂ ಪಾತ್ರಗಳ ಮನಸ್ಥಿತಿಗೆ ಸುತ್ತಲಿನ ನಿಗೂಢತೆಗೆ ಸಾಂಕೇತಿಕವಾಗಿ ಬೆಳೆಯುತ್ತಿದ್ದರೂ ಕ್ರಮೇಣ ಉಗ್ರಗಿರಿ ಬರಿಯ ಸಂಕೇತದ ಸ್ಥಿತಿಯಿಂದ ಹೊರಬರುತ್ತದೆ. ಜಗನ್ನಾಥ ಅಂದಿನ ರಾತ್ರಿಯ ಗೋಪಾಲಯ್ಯನ ಮಾತುಗಳಿಂದ ಎಚ್ಚರಗೊಂಡವನು ಉಗ್ರಗಿರಿಯ ಚಲನೆಯನ್ನು ತನ್ನೊಳಗಿನ ಚಲನೆಯೊಗಿಯೂ ಗುರುತಿಸಿಕೊಳ್ಳುತ್ತಾನೆ. ಈ ರೀತಿಯಾಗಿ ಅನುಭವದ ಬೆನ್ನು ಹತ್ತುವುದರಿಂದ ಅರಿವು ಇದ್ದಕ್ಕಿದ್ದಂತೆ ತನ್ನ ತೆಕ್ಕೆಗೆ ಬಂದು ಬೀಳುವಂತಹದ್ದಲ್ಲ. ಹೀಗೆ ನಿರೀಕ್ಷಿಸದೇ ಇರುವ ಅನುಭವ ಎದುರಾದಾಗ ಅದರೊಡನೆಯೆ ಕಾಣುವ ಕಣ್ಣು ತೆರೆದುಕೊಂಡಿದ್ದರೆ ಅಂತಹ ಅನುಭವದಿಂದ ಅರಿವು ತೆರೆದುಕೊಳ್ಳುತ್ತದೆಯೆ ಹೊರತು, ಅರಿವಿಗಾಗಿ ಅನುಭವದ ಬೆನ್ನು ಹತ್ತಿದರೆ ಅದೂ ಮನುಷ್ಯನಿಂದ ದೂರ ಸರಿಯುತ್ತದೆ. ಆದ್ದರಿಂದ ಅನುಭವದಿಂದ ಪಡೆಯುವ ಅರಿವಿನ ಮಿತಿಯನ್ನು 'ನಿಗೂಢ ಮನುಷ್ಯ'ರಲ್ಲಿ ಗುರುತಿಸುತ್ತಾರೆ.

**ಅಡಿ ಟಿಪ್ಪಣಿ**

1. ಎಸ್ ಆರ್ ವಿಜಯ ಶಂಕರ (ಸಂ) ಪ್ರತಿಮಾಲೋಕ ; ಅಂಕಿತ ಪುಸ್ತಕ, ಮೊದಲನೆ ಮುದ್ರಣ 2008, ಪು. 112
2. ಕೆ.ಪಿ. ಪೂರ್ಣ ಚಂದ್ರ ತೇಜಸ್ವಿರವರ 'ನಿಗೂಢ ಮನುಷ್ಯರು 'ಕಾದಂಬರಿ ,ಪುಸ್ತಕ ಪ್ರಕಾಶನ ಆರನೆಯ ಮುದ್ರಣ 2007 ಪು.118
3. – ಅದೇ –ಪು .118
4. – ಅದೇ –ಪು .116
5. – ಅದೇ –ಪು .119
6. – ಅದೇ –ಪು .120
7. – ಅದೇ –ಪು .128
8. – ಅದೇ –ಪು .124
9. – ಅದೇ –ಪು .125
10. – ಅದೇ –ಪು .118

# ಆಕಾರ ಗ್ರಂಥಗಳು

1. ಕೆ.ಪಿ. ಪೂರ್ಣ ಚಂದ್ರ ತೇಜಸ್ವಿ 'ಸ್ವರೂಪ 'ಕಾದಂಬರಿ ,ಪುಸ್ತಕ ಪ್ರಕಾಶನ ಆರನೆಯ ಮುದ್ರಣ 2007
2. ಕೆ. ಪಿ ಪೂರ್ಣಚಂದ್ರ ತೇಜಸ್ವಿ 'ಚಿದಂಬರ ರಹಸ್ಯ' ಸುವರ್ಣ ಕರ್ನಾಟಕ,ಕನ್ನಡ ಮತ್ತು ಸಂಸ್ಕೃತಿ ಇಲಾಖೆ,2006
3. ಕೆ. ಪಿ. ಪೂರ್ಣಚಂದ್ರ ತೇಜಸ್ವಿ, 'ಕರ್ವಾಲೊ' ಪುಸ್ತಕ ಪ್ರಕಾಶನ, ಇಪ್ಪತ್ತೊಂಭತ್ತನೆ ಮುದ್ರಣ 2011
4. ಕೆ.ಪಿ. ಪೂರ್ಣ ಚಂದ್ರ ತೇಜಸ್ವಿ 'ನಿಗೂಢ ಮನುಷ್ಯರು' ಕಾದಂಬರಿ ,ಪುಸ್ತಕ ಪ್ರಕಾಶನ ಆರನೆಯ ಮುದ್ರಣ 2007

# ಸಹಾಯಕ ಗ್ರಂಥಗಳು

1. ಅನಂತ ಮೂರ್ತಿ ಯು. ಆರ್ ; ಪ್ರಜ್ಞೆ ಮತ್ತು ಪರಿಸರ ಅಕ್ಷರ ಪ್ರಕಾಶನ, ಸಾಗರ ,1976
2. ಕೆ. ಪಿ ಪೂರ್ಣಚಂದ್ರ ತೇಜಸ್ವಿ ; ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ, 2009
3. ನಟರಾಜ್ ಹುಳಿಯಾರ್ (ಸಂ) ರಾಮ ಮನೋಹರ ಲೋಹಿಯಾ ಚಿಂತನೆ, ಪ್ರಸಾರಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ, 2008
4. ಎಸ್ ಆರ್ ವಿಜಯಶಂಕರ(ಸಂ) ಪ್ರತಿಮಾಲೋಕ, ಗೋಪಾಲ ಕೃಷ್ಣ ಅಡಿಗ –ಮರು ಓದು, ಅಂಕಿತ ಪುಸ್ತಕ, ಬೆಂಗಳೂರು, 2008
5. ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ ; ಎಲ್.ಎಸ್ ಶೇಷಗಿರಿ ರಾವ್, ವಸಂತ ಪ್ರಕಾಶನ,ಬೆಂಗಳೂರು, 2008
6. ರಾಜೇಂದ್ರ ಚೆನ್ನಿ ; ದೇಶೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1999
7. ಡಾ. ಸುರೇಶ್ ಪಾಟೀಲ ; ಕಾದಂಬರಿ ಮೀಮಾಂಸೆ, ಸಿವಿಜಿ ಇಂಡಿಯಾ, 2011
8. ಡಾ. ಸುರೇಶ್ ಪಾಟೀಲ ; ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತು ವಿನ್ಯಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2008
9. ತಿರುಮಲೇಶ್ ಕೆ. ವಿ ; ಅಸ್ತಿತ್ವವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1989
10. ಡಿ ಆರ್ ನಾಗರಾಜ್ ;ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಸಾಗರ 1996

11. ಓ.ಎಲ್ ನಾಗಭೂಷಣ ಸ್ವಾಮಿ ; ವಿಮರ್ಶೆಯ ಪರಿಭಾಷೆ ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ 1983

12.ಕೆ.ವಿ ನಾರಾಯಣ ; ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, ಬೆಂಗಳೂರು,1997

13.ಬಸವರಾಜು ಕಲ್ಗುಡಿ ; ಅನುಭಾವಃ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 2001

14. ಕೆ.ವಿ.ನಾರಾಯಣ, ಧ್ವನ್ಯಾಲೋಕದ ಓದು, ಅಭಿನವ ಪ್ರಕಾಶನ ಬೆಂಗಳೂರು,2009

15.ಕೆ.ವಿ.ನಾರಾಯಣ, ಮತ್ತೆ ಭಾಷೆಯ ಸುತ್ತಮುತ್ತ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು. 2001

16. ಡಾ. ಮಾಧವ ಪೆರಾಜೆ ; ಡೆರಿಡಾ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 2003

17.ಕನ್ನಡ ಸಂಶೋಧನೆಯ ವೈಧಾನಿಕತೆಗಳು (ಸಂ) ಡಾ. ಅಮರೇಶ ನುಗಡೋಣಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ 2008

